ಪುರಾಣವೆಂದೂ ಹೇಳಿಕೊಳ್ಳುತ್ತಿದ್ದಾರೆ ಎಂದು ಆರೋಪಿಸಿ ತಾವೂ ಅದರಂತೇನೆ ಎಂದು ಅಸಂಗತ ಬರೆದರೆ ತಪ್ಪೇನು ಎಂಬ ಅಭಿಪ್ರಾಯ ಸದರಿಯವರದ್ದು ಇರಬಹುದು. ಆದರೆ ಗ್ರಾಮಪದ್ಧತಿ ಸಹ್ಯಾದ್ರಿ ಮೂಲಕವಾದುದರಿಂದ ಅಪ್ರಮಾಣ ಆಗುವುದಿಲ್ಲ. ಸದರಿಯವರು ಬರೆಯುತ್ತಿರುವುದು ಸಂಶೋಧನೆ ವಿಮರ್ಶವೆಂಬುದಕ್ಕಿಂತ ಕಾದಂಬರಿ ಎನ್ನುವುದು ಉಚಿತವೆನಿಸುತ್ತದೆ.

"ಗೋಕರ್ಣ ಮಾಹಾತ್ಮ್ಯ" ಎಂಬದೊಂದು ಚಿಕ್ಕ ಪುಸ್ತಕ ಇದೆ. ಸಹ್ಯಾದ್ರಿಯ ವಿಷಯಗಳನ್ನೆ ಒಳಗೊಂಡಿದೆ. ಆದರೆ ಸಹ್ಯಾದ್ರಿಯಂತೆ ಸಪ್ತಕ್ಷೇತ್ರಗಳನ್ನೊಳಗೊಂಡಿಲ್ಲ. ಕೇವಲ ಗೋಕರ್ಣದ ವಿಷಯವನ್ನಷ್ಟೇ ಸಹ್ಯಾದ್ರಿಯಿಂದಾರಿಸಿ ಬರೆದದ್ದಾಗಿದೆ. ಅದು ಪ್ರಮಾಣವಾಗಬಹುದಂತೆ. ಕೋಟ ಶೀವಳ್ಳಿಯವರನ್ನು ಪ್ರಸ್ತಾಪಿಸುವುದಿಲ್ಲವಾದ್ದರಿಂದ ಚರಿತ್ರೆಗೆ ಸಮೀಪವಿದೆಯಂತೆ. ಚರಿತ್ರೆ ಏಕೆ ಅಲ್ಲವೆಂದರೆ ಹವೀಕರನ್ನು ಕರೆಯಿಸಿ ಗೋಕರ್ಣ ದೇವಸ್ಥಾನದ ಅರ್ಚನಾದಿ ಕಾರ್ಯಗಳಲ್ಲಿ ತೊಡಗಿಸಿ, ಅಧಿಕಾರ, ಗ್ರಾಮ, ವಗೈರೆ, ಕೊಟ್ಟು ನೆಲೆಸಿದ್ದರಿಂದ, ತುಳುನಾಡಿನಲ್ಲಿ ಉಂಬಳಿ ಪಡೆದವರು ಗೋಕರ್ಣದ ಹವೀಕರೂ ಒಬ್ಬರಾಗಿ "ಸ್ಥಾನಿಕರೇ ಉಂಬಳಿಯನ್ನು ತುಳುನಾಡಿನಲ್ಲಿ ಪಡೆದವರು. ಬೇರೆ ಯಾವ ಬ್ರಾಮ್ಹಣರೂ ಉಂಬಳಿ ಪಡೆದಿಲ್ಲ"ವೆಂಬ ಭಟ್ಟರು ಕಲ್ಪಿಸಿದ ಸಿದ್ಧಾಂತಕ್ಕೆ ವಿರೋಧವಾಗುತ್ತದೆ. ಆದುದರಿಂದ ಚರಿತ್ರೆ ಖಂಡಿತ ಆಗುವುದಿಲ್ಲ. ಉತ್ತರಸಹ್ಯಾದ್ರಿಯಂತೂ,

> ರಜತಪೀಠಂ ಕುಮಾರಾದ್ರಿಃ ಕುಂಭಕಾಶಿ ಧ್ವಜೇಶ್ವರಃ |
> ಕ್ರೋಡ, ಗೋಕರ್ಣ, ಮೂಕಾಂಬಾಃ ಸಪ್ತೈತಾ ಮೋಕ್ಷದಾಯಕಾಃ ||

ಎಂಬ ಶ್ಲೋಕ ಪ್ರಕಾರ ತುಳುವದ ಪ್ರಸಿದ್ಧ ಸಪ್ತಕ್ಷೇತ್ರಗಳಲ್ಲಿಯೂ, ಗೋಕರ್ಣದಂತೇನೆ ಬ್ರಾಮ್ಹಣರ ಕೊರತೆ ಇದ್ದುದರಿಂದ ಹಿತಚಿಂತಕರಾಗಿ 32 ಗ್ರಾಮಗಳಲ್ಲಿ ಬ್ರಾಮ್ಹಣರನ್ನು ಕರೆತರಿಸಿ ನೆಲೆಸಿದ್ದರ ಕುರಿತು ಯತಾರ್ಥ ಇತಿಹಾಸ ಬರೆದರೂ ಪೂರ್ವೋಕ್ತ ಅಪಸಿದ್ಧಾಂತಗಳಿಗೆ ವಿರುದ್ಧವಾಗಿ ವಾದವನ್ನು ಹೂಡಿದ್ದರಿಂದ ಮತ್ತು ತಾವು ಎತ್ತಿಹಿಡಿಯಬೇಕೆಂದು ಅಭಿಲಾಷೆ ಪಟ್ಟಿರುವ, ಮತ್ತು ಸ್ಥಾನ, ಮಾನ ರಕ್ಷಣೆಯ ಹೊಣೆ ಹೊತ್ತಿರುವ ಸ್ಥಾನಿಕರನ್ನು ಹೀನವಾಗಿರಿಸಿದ್ದರಿಂದ ಸಹ್ಯಾದ್ರಿಯು ಚರಿತ್ರೆಯೂ ಅಲ್ಲ, ಚರಿತ್ರೆಯ ಸಮೀಪವೂ ಅಲ್ಲ. ಸಂಪೂರ್ಣ ಚರಿತ್ರೆಗೆ—ಭಟ್ಟರ ಚರಿತ್ರೆಗೆ—ವಿರುದ್ಧವಾಗಿದೆ. ಅದಕ್ಕೆ ಪ್ರಾಮಾಣ್ಯವೂ ಇರಬಾರದು. 14ನೇ ಶತಮಾನದ ನಂತರ ಶೀವಳ್ಳಿಯವರು ಆತ್ಮಪ್ರೌಢಿಯನ್ನು ಹರಡಿಸಲು ಬರೆದದ್ದು ಎಂತ (ಪು. 105)ರಲ್ಲಿ ನಿಶ್ಚಿತ ತೀರ್ಮಾನವಿತ್ತಿದ್ದಾರೆ. ಮತ್ತು (ಪು. 100—112) ವರೇಗೆ ಅಲ್ಲಸಲ್ಲದ ಕ್ಷುಲ್ಲಕ ಕಾರಣಗಳ ಬತಾವಣೆಮಾಡಿ ಸಹ್ಯಾದ್ರಿಯನ್ನು ತೆಗಳುವ ಪ್ರಯತ್ನ ಪಟ್ಟಿದ್ದಾರೆ. ಆ ತೆಗಳುವಿಕೆಯ ನಿರಾಕರಣೆಯು ಇಷ್ಟರ ತನಕ ಮಾಡಿದ ಪ್ರತಿಪಾದನೆಯಿಂದ ವ್ಯಕ್ತವಾಗಿದೆ. ಇನ್ನು ಪ್ರತ್ಯೇಕವಾಗಿ ನಿರಾಕರಿಸಬೇಕಾಗಿಲ್ಲ.

ಉತ್ತರ ಸಹ್ಯಾದ್ರಿಯು ಶೀವಳ್ಳಿಯವರ ಸಂಪರ್ಕವಿಲ್ಲದೆ ಕೊಚ್ಚಿಯಿಂದ ಕಾಶಿ ಪರ್ಯಂತ 14 ಪುಸ್ತಕಗಳ ಪಾಠಗಳನ್ನು ಪರಾಮರ್ಶಿಸಿ ಮುದ್ರಿತವಾಗಿದೆ. ಸದರಿ ಪುಸ್ತಕವು ವಿವೇಕಿಗಳಿಗೆ ಆದರಣೀಯವಾಗಬೇಕು.

ಸದರಿ ಸಹ್ಯಾದ್ರಿಯಲ್ಲಿ ಪ್ರತಿಪಾದನೆ ಮಾಡಿದ ಪ್ರತಿ ಒಂದು ವಿಷಯವನ್ನು ಸಮರ್ಥ ಕಾರಣ ಕೊಡದೆ, ತಮ್ಮ ಮುತುವರ್ಜಿ ಪ್ರಕಾರ ಕೋಜಾಗರೀ ವ್ರತದಲ್ಲಿ ಕಾಣಬರುವ ಚಂಡಿ ಎಂಬಾಕೆಯು, ಗಂಡನ ಪ್ರತಿ ಒಂದು ಮಾತಿಗೂ ಹೇಗೆ ವಿರುದ್ಧವಾಡುತ್ತಾಳೋ? ಹಾಗೆ ಭಟ್ಟರು ತುಳುನಾಡು ಪುಸ್ತಕದಲ್ಲಿ ಉತ್ತರ ಸಹ್ಯಾದ್ರಿಯ ಪ್ರತಿ ಒಂದು ವಾಕ್ಯಾರ್ಥವನ್ನು ವಿರೋಧಿಸುತ್ತಾರೆ.

**ಜನರ ಅವಗಾಹನೆಗಾಗಿ ಕೆಲವು ಉದಾಹರಣೆ ಕೊಡಲಾಗುತ್ತದೆ**

| | ಸಹ್ಯಾದ್ರಿ ವಿಷಯ | ತುಳುನಾಡು ವಿಷಯ |
|---|---|---|
| 1. | ಮಯೂರವರ್ಮನು ಕ್ಷತ್ರಿಯನು | —ಅಲ್ಲ. ಮಾನವ್ಯ ಗೋತ್ರದ ಬ್ರಾಹ್ಮಣ |
| 2. | ,, ಸೂರ್ಯವಂಶದವನು | —ಅಲ್ಲ. ಕದಂಬ ವಂಶದವನು |
| 3. | ಹವೀಕ, ಕೋಟ, ಶೀವಳ್ಳಿಯವರು ಮಯೂರವರ್ಮನಿಂದ ಕರೆಸಿ ನೆಲೆಸಿದವರು | ಅಲ್ಲ. ನಿರ್ವಾಸಿತರಾಗಿ ವಲಸೆ ಬಂದವರು |
| 4. | ಸದರಿಯವರು ಏಕಕಾಲದಲ್ಲಿ ಬಂದವರು | ಅಲ್ಲ. 2ನೇ ವಲಸೆ ಹವೀಕರು, 3ನೇ ವಲಸೆ ಕೋಟ, ಮತ್ತು ಶೀವಳ್ಳಿಯವರು |
| 5. | ಸದರಿಯವರು ಸಕುಟುಂಬ ಬಂದಿರುತ್ತಾರೆ | ಇಲ್ಲ. ಗಂಡಸರು ಮಾತ್ರ ಬಂದಿರುತ್ತಾರೆ |
| 6. | ಮಯೂರವರ್ಮನು ಅಗ್ರಹಾರ, ಗ್ರಾಮ ಮೊದಲಾದುವುಗಳನ್ನು ಕೊಟ್ಟು ಸತ್ಕರಿಸಿದನು | ಇಲ್ಲ. ಸ್ಥಾನಿಕರ ಕಡೆಯಿಂದ ಅಧಿಕಾರ, ಗ್ರಾಮಗಳನ್ನು ಅಪಹರಿಸಿ ಮೆರೆದರು |
| 7. | ಹವೀಕ, ಕೋಟ, ಶೀವಳ್ಳಿಯವರು ಗೋದಾತೀರದ ಅಹಿಚ್ಛತ್ರದಿಂದ ಬಂದರು | ಅಲ್ಲ. ಹವೀಕರು ಉತ್ತರ ಪಾಂಚಾಲದಿಂದ ಬಂದರು. ಕೋಟ ಶೀವಳ್ಳಿಯವರು ಕುಪ್ಪೆತ್ತೂರಿನಿಂದ ಬಂದಿರುತ್ತಾರೆ |
| 8. | ಶೀವಳ್ಳಿಯವರು ಪರಿಶುದ್ಧರು | —ಅಲ್ಲ. ಅವರು ಶೂದ್ರಸ್ತ್ರೀ ಸಂತತಿಯವರು |

| | | |
|---|---|---|
| 9. | ಸ್ಥಾನಿಕರು ದಾಸೀಪುತ್ರರು | —ಅಲ್ಲ. ಸರ್ವಶ್ರೇಷ್ಠ ಬ್ರಾಹ್ಮಣರು |
| 10. | ಗೋದಾತೀರದಲ್ಲಿ ಅಹಿಚ್ಛತ್ರವಿದೆ | —ಇಲ್ಲ. ತೆಲಂಗಾಣದಲ್ಲಿ ಯಾವ ಅಹಿಚ್ಛತ್ರವೂ ಇಲ್ಲ |
| 11. | ಬಸರೂರಲ್ಲಿ ವಸು ಚಕ್ರವರ್ತಿ ಇದ್ದಾನೆ . . . | ಇಲ್ಲ. ಆತ ಕಾಲ್ಪನಿಕ ವ್ಯಕ್ತಿ |
| 12. | ಮಟ್ಟು ಬ್ರಾಹ್ಮಣರು ಪರಶುರಾಮ ನಿರ್ಮಿತರು . . . | ಅಲ್ಲ. ಸೋದೆ ಶ್ರೀವಾದಿರಾಜರಿಂದ ಬ್ರಾಹ್ಮಣರಾಗಿ ಪರಿವರ್ತಿಸಲ್ಪಟ್ಟವರು |
| 13. | ಕೋಟೀಶ್ವರದವರನ್ನು ಉದ್ಧಾರ ಮಾಡಿದವರು ಅಚ್ಯುತ ಪ್ರೇಕ್ಷಾಚಾರ್ಯರ ಪರಂಪರೆಯಲ್ಲಿದ್ದ ಪೂರ್ವಿಕರು, ಭಾಗವತ ಸಂಪ್ರದಾಯದವರು . . . | ಅಲ್ಲ. ಸೋದೆ ಶ್ರೀ ವಾದಿರಾಜರು |
| 14. | ಮಯೂರವರ್ಮನ ತಂದೆ ಹೇಮಾಂಗದ, ವ ಮಣಿವರ್ಮ. . | ಅಲ್ಲ. ಚರಿತ್ರೆಯಲ್ಲಿ ಆತನ ಹೆಸರು ಇಲ್ಲ |
| 15. | ಗೌಡ ಸಾರಸ್ವತರು, ಸಾರಸ್ವತರು, ಬೇರೆ, ಕೊಂಕಣಿಗರು ಬೇರೆ . | ಅಲ್ಲ. ಗೌಡಸಾರಸ್ವತ, ಸಾರಸ್ವತ, ಕೊಂಕಣಿಗರು ಒಂದೇ |
| 16. | ಚಿತ್ಪಾವನರು ಶಾಪಗ್ರಸ್ತರು, "ಶಾಪಿತಾಸ್ತೇನ ತೇ ವಿಪ್ರಾಃ ನಿಂದ್ಯಾಶ್ಚೈವ ಕುಚಿಕಿತ್ಸಕಾಃ" . . | ಅಲ್ಲ. ಪರಿಶುದ್ಧರು |
| 17. | ಖರಾಡೆಯವರು ಕಠಿಣರು, ದುರ್ಜನರು . . . | ಅಲ್ಲ. ಒಳ್ಳೆಯವರು, ಸುಜನರು |
| 18. | ಪಂಚಗ್ರಾಮ, ಸಕಲಪುರಿಯವರು ವಗೇರರು, ಪತಿತರು . . | ಅಲ್ಲ. ಪರಿಶುದ್ಧರು |

ಗೋಕರ್ಣ ಮಹಾತ್ಮ್ಯೆಯು ಸಹ್ಯಾದ್ರಿ ಉತ್ತರ ಖಂಡದಿಂದ ಗೋಕರ್ಣದ ಮಟ್ಟಿಗೆ ವಿಷಯಗಳನ್ನು ಆರಿಸಿ ಪ್ರತ್ಯೇಕವಾಗಿ ಬರಕೊಂಡಂತೆ ತುಳು ಗ್ರಾಮಪದ್ಧತಿಯು ಶೀವಳ್ಳಿಯವರ ಮಟ್ಟಿಗೆ ಅದೇ ಉತ್ತರ ಸಹ್ಯಾದ್ರಿಯಿಂದ ತಮ್ಮ ಕುರಿತಾದ ವಿಷಯಗಳನ್ನು ತಮಗೆ ಗೊತ್ತಿದ್ದಂತೆ ಬರೆದ ಪುಸ್ತಕವಾಗಿರಬಹುದು. ಅದರಲ್ಲಿ ಬರೆದ ಅನೇಕ ವಿಷಯಗಳು ಉತ್ತರ ಸಹ್ಯಾದ್ರಿಯಲ್ಲಿ ಇಲ್ಲದಿರಬಹುದು, ಕೆಲವು ತಪ್ಪೂ ಇರಬಹುದು.

ಆದರೆ ಅದನ್ನೆಲ್ಲಾ ಪ್ರತ್ಯಂತರ ಪುರಾವೆಗಳಿಂದ ಶೋಧಿಸಿ, ಭಂಗಾರದ ಕಲ್ಲಿನಿಂದ ಭಂಗಾರವನ್ನು ವಿಂಗಡಿಸಿ ಪೃಥಕ್ಕರಿಸಿ ತೆಗೆದು ಉಪಯೋಗಿಸುವಂತೆ ಉಪಯೋಗ ಮಾಡಿಕೊಳ್ಳಬೇಕು. ನಿರುಪಯೋಗಿ ಎಂದು ಅವಹೇಳನ ಮಾಡುವುದು ಬಾಲತನ ವ ಬಾಲಿಶತನವೆಂದೇ ಹೇಳಬೇಕಾಗುತ್ತದೆ. ವೇದ ಶಾಸ್ತ್ರ ಪುರಾಣಗಳನ್ನು ಆಕರವೆಂದು ಕರೆಯುವ ಪದ್ಧತಿ. ಆಕರದಲ್ಲಿ (ಖಣಿಯಲ್ಲಿ) ಕಚ್ಚಾ ಮಾಲು ದೊರೆಯುತ್ತದೆ. ಅದರಿಂದಲೇ ಬಜಾರದಲ್ಲಿನ ಪಕ್ಕಾಮಾಲು ಪಡೆಯಲು ಸಾಧ್ಯ. ವೇದ ಶಾಸ್ತ್ರ ಪುರಾಣ ಗಳ ಉಪಯೋಗ ಮಾಡಿಕೊಳ್ಳುವ ರೀತಿ ಈ ಪಥವೀದರರಿಗೆ ತಿಳಿದುಬಂದಿರುವುದಿಲ್ಲ. ಸರ್ವಜ್ಞರೆಂಬ ಅಭಿಮಾನ ಮಾತ್ರ ತುಂಬಿರುತ್ತದೆ. ಅಂಥವರಿಂದ ಒಳ್ಳೇವನ್ನು ಅಪೇಕ್ಷಿಸುವುದು ವಿಫಲ.

ತು. ಪು. 95 ಮಯೂರವರ್ಮನು (345-370) ಬನವಾಸಿ ಕದಂಬರು (670-455) ಹೀಗೆಲ್ಲಾ ಅಲ್ಲಲ್ಲಿ ಕ್ರಿಸ್ತಶಕಕಾಲ ನಿರ್ದೇಶ ಮಾಡಿಯದೆ. ಅದೂ ಸಹ ಇಂಗ್ಲೀಷರು ಬರೆದುಕೊಟ್ಟ ಕಾಲವನ್ನೇ ತಿರುವುಮುರುವು ಮಾಡಿ ಬರೆದುದರಿಂದ ಅವಶ್ಯಕ ಪ್ರಮಾಣವೆಂದು ಒಪ್ಪಬೇಕಾಗಿಲ್ಲ. ಇಂಗ್ಲೀಷರು ಭಾರತೀಯ ಇತಿಹಾಸ ಬರೆಯುವಾಗ ಉಪಯೋಗಿಸಿದ B. C. A. D. ಎಂದು ನಿರ್ದೇಶಿಸಿದ ಕಾಲವು ಯಾವುದೂ ವಸ್ತುಸ್ಥಿತಿಗೆ ಸರಿಯಾದುದಲ್ಲ. ಅದರ ಅಡಿಗಲ್ಲೇ ಮೊದಲು ತಪ್ಪು ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಭಾರತದ ಇತಿಹಾಸದಲ್ಲಿ ದೊಡ್ಡ ಅಂಧಕಾರ ಕವಿದಿತ್ತು, ತಮ್ಮ ಪರಿಶ್ರಮದಿಂದಲೇ ಬೆಳಕು ಮೂಡಿತು, ಎಂದು ಇಂಗ್ಲೀಷರಿಗೆ ಪ್ರಚಾರ ಮಾಡುವುದಿತ್ತು. ಅವರು ಭಾರತೀಯರನ್ನು ಇತಿಹಾಸದ ಸುಜ್ಞಾನದ ಕಡೆ ಯಿಂದ ಒಯ್ಯುತ್ತಿದ್ದು ದುರ್ಜ್ಞಾನದಲ್ಲಿ ಮುಳುಗಿಸಿ ಇದೇ ಸುಜ್ಞಾನವೆಂದು ನಮ್ಮ ಮನಸ್ಸಿನಲ್ಲಿ ಬಿಂಬಿಸಿದ್ದಾರೆ. ಉದಾಹರಣೆ—ಮಹಾಭಾರತದ ಯುದ್ಧಾನಂತರ 15 ಶತಕಗಳು ಮುಗಿದು 16ನೇ ಶತಮಾನದ ಆರಂಭದಲ್ಲಿ ಮೌರ್ಯ ಚಂದ್ರಗುಪ್ತನು ಚಾಣಕ್ಯನ ಮಾರ್ಗದರ್ಶನದಲ್ಲಿ ನಂದ ಸಾಮ್ರಾಜ್ಯವನ್ನು ಕೊನೆಗಾಣಿಸಿ ಮೌರ್ಯ ಸಾಮ್ರಾಜ್ಯವನ್ನು ಸ್ಥಾಪನೆ ಮಾಡಿದನು. ಆ ಸಮಯವು ಕ್ರಿ. ಪೂರ್ವ 15ನೇ ಶತಕ (B. C. 15 ಶತಮಾನ) ವಾಗುತ್ತದೆ. ಇದು ಭಾರತದ ನಿಜವಾದ ಇತಿಹಾಸದಿಂದ ಸಿದ್ಧವಾದ ಕಾಲ. ಇದನ್ನು ಬದಲಾಯಿಸಬೇಕಾದ ಯಾವ ಕಾರಣವೂ ಇರುವುದಿಲ್ಲ. ಕೆಲವು ಪುರಾಣಗಳಲ್ಲಿಯ ಲೇಖಕರ ದೋಷದಿಂದ ಏರ್ಪಟ್ಟ ಅಪಪಾಠಗಳನ್ನು ತಿದ್ದಿ ಕೊಳ್ಳಲು ಪ್ರಯತ್ನಿಸದೆ ಪುರಾಣಗಳ ಅನಾದರಣೀಯತೆಯನ್ನು ಉಪಪಾದಿಸಿ "ಕ್ರಿ. ಶ. 322ಕ್ಕೆ ಮೌರ್ಯ ಚಂದ್ರಗುಪ್ತನಿದ್ದನು" ಎಂಬ ಸಿದ್ಧಾಂತ ಮಾಡಿ ಅದನ್ನೇ ಈಗ 180 ವರ್ಷಗಳಿಂದ ಪಠ್ಯ ಪುಸ್ತಕಗಳಲ್ಲಿ ಬರೆದು ಓದಿಸಿ ಕಲಿಸಿ ಭಾರತೀಯ ಹುಡುಗರ ತಲೆಯೊಳಗೆ ಶಾಲೆಯಲ್ಲಿ ತುರುಕಿಸಲಾಗುತ್ತದೆ. ಮೌರ್ಯ ಚಂದ್ರಗುಪ್ತನ ಕಾಲ B. C. 322 ಎಂದು ನಿರ್ಣಯಿಸಿದ್ದು ಒಂದು ಚಮತ್ಕಾರದ ಸಂಗತಿಯಾಗಿದೆ. ಸರ್ ವಿಲಿಯಂ ಜೋನ್ಸ್ ಎಂಬ ಇಂಗ್ಲೀಷ್ ಪಂಡಿತನು 28—2—1793ರಲ್ಲಿ

"ರಾಯಲ್ ಏಸಿಯಾಟಿಕ್ ಸೊಸೈಟಿ ಕಲಕತ್ತಾ" ಇದರಲ್ಲಿ ಒಂದು ಲೇಖನ ಪ್ರಕಟಿಸಿ ಪುರಾಣೋಕ್ತ ಕಾಲವನ್ನೊಪ್ಪದಿದ್ದ ಮೇಲೆ ಮತ್ತೊಂದು ಕಾಲ ಕಲ್ಪಿಸಲು ತೊಳ ಲಾಡುತ್ತಿದ್ದ ಇತಿಹಾಸಕಾರರಿಗೆ ದಿವ್ಯ ಮಾರ್ಗದರ್ಶನ ನೀಡಿದ ಅಪೂರ್ವ ಯಶಸ್ಸನ್ನು ಸಂಪಾದಿಸಿದನು. ಭಾರತದ ಹೊರಗೆ ರಾಜ್ಯವಾಳುತ್ತಿದ್ದ ಗ್ರೀಕ ಅರಸ ಸೇಲ್ಯೂಕಸನ ರಾಜದೂತನೊಬ್ಬ ಮೆಗಸ್ತನೀಸನೆಂಬಾತನು ಭಾರತದ ರಾಜನೊಬ್ಬನ ಆಸ್ಥಾನದಲ್ಲಿರು ತ್ತಿದ್ದನು. ಆತನು ಭಾರತದ ಕುರಿತಾದ ಇತಿಹಾಸವನ್ನು ತನಗೆ ತಿಳಿದಂತೆ ವಿಚಾರಿಸಿ ಬರೆದು ಇಟ್ಟುಕೊಂಡಿದ್ದು ಆ ಲೇಖನಗಳನ್ನು ತಮ್ಮ ಮಾತೃದೇಶಕ್ಕೆ ಮುಟ್ಟಿಸು ತ್ತಿದ್ದನು. ಸದರಿ ಲೇಖನದಲ್ಲಿ ಮೆಗಸ್ತನೀಸನು ತಾನು ಇರುತ್ತಿರುವ ಆಸ್ಥಾನದ ಕುರಿತು ಬರೆಯುವಾಗ "ಪ್ರಸ್ಸಿ" ದೇಶದ "ಪಾಲಿವೊಥ್ರಾ" ಶಹರದಲ್ಲಿ "ಹೆಂಡ್ರಾ ಕೋಟಸ" ಎಂಬ ರಾಜನ ಆಸ್ಥಾನದಲ್ಲಿ ಇರುತ್ತಿದ್ದುದಾಗಿ ಬರೆದಿರುತ್ತಾನೆ. ಅದಕ್ಕೆ ಕೆಲವು ಯೂರೋಪ್ ಪಂಡಿತರು "ಪ್ರಸ್ಸಿ" ಪದಕ್ಕೆ ಪ್ರಸಯಿಾ ಎಂಬ ಶೂರಸೇನ ರಾಜ್ಯ ನೆಂತಲೂ "ಪಾಲಿವೊಥ್ರಾ" ಪದಕ್ಕೆ ಪಾರಿಭದ್ರಕ ಶಹರವೆಂತಲೂ ಅಲ್ಲಿದ್ದ "ಹೆಂಡ್ರಾ ಕೋಟಸನು" ಚಂದ್ರಕೇತುವೆಂಬ ಚಂದ್ರಗುಪ್ತನೆಂಬ ಅರಸನೆಂದೂ ಅರ್ಥ ಹಚ್ಚಿದ್ದಾರೆ. ತಮ್ಮ ಪಕ್ಷದ ಸಮರ್ಥನೆಗಾಗಿ ಪಾಲಿವೊಥ್ರಾ ನಗರವು ಗಂಗಾ-ಯಮುನಾ ಸಂಗಮ ದಿಂದ 200 ಮೈಲು ಪಶ್ಚಿಮಕ್ಕೆ ಇರುತ್ತದೆಂಬ ಉಲ್ಲೇಖವನ್ನು ಎತ್ತಿ ಹಿಡಿದಿದ್ದಾರೆ. ಮತ್ತು ಹೀರಾಕ್ಲೀಜನೆಂಬವನು ಅನೇಕ ಶಹರಗಳನ್ನು ಏರ್ಪಡಿಸಿದ್ದನು. ಅದರ ಪೈಕಿ ಪಾಲಿವೊಥ್ರಾ ದೊಡ್ಡದು. ಎಂಬ ಮೆಗಸ್ತನೀಸನ ವಾಕ್ಯಗಳನ್ನು ಉದಾಹರಿಸುತ್ತಾರೆ. ಹೀರಾಕ್ಲೀಜನೆಂದರೆ ಶ್ರೀಕೃಷ್ಣನು ಇರಬೇಕೆಂದು ಆತನ ವರ್ಣನೆಯಿಂದ ನಿಶ್ಚಯಿಸ ಬಹುದು. ಆತನು ಬರೆಯುತ್ತಾನೆ—ಹೀರಾಕ್ಲೀಜನು ಬುದ್ಧಿಬಲ, ದೇಹಬಲ,ಗಳಲ್ಲಿ ಇತರ ಎಲ್ಲರಿಗಿಂತಲೂ ಹೆಚ್ಚಿನವನಿದ್ದಾನೆ. ಬಹಳ ಹೆಂಗಸರನ್ನು ಮದುವೆಯಾಗಿ ಅನೇಕ ಮಕ್ಕಳನ್ನು ಪಡೆದಿರುತ್ತಾನೆ, ಎಂದು ಈ ವಾಕ್ಯಗಳ ಪರಾಮರ್ಶೆಯಿಂದ ಮೆಗಸ್ತ ನೀಸನ ಹೆಂಡ್ರಕೋಟಸನು ಪ್ರಯಾಗಕ್ಕೆ ಪಶ್ಚಿಮಕ್ಕಿರುವ ಶೂರಸೇನ ರಾಜ್ಯದ ಪ್ರಸಯಿಾ ರಾಜಧಾನಿ ಪಾರಿಭದ್ರಕದಲ್ಲಿರುವ ಚಂದ್ರಕೇತು ಎಂಬ ಯದುವಂಶದ ರಾಜನು. ಮತ್ತು ಮೆಗಸ್ತನೀಸನ ಹೆಂಡ್ರಾಕೋಟಸನು ಸೆಲ್ಯೂಕಸನ ಮಗಳನ್ನು ಮದುವೆಯಾಗಿದ್ದನು. ಬೌದ್ಧಮತಕ್ಕೆ ಬೆಂಬಲ ನೀಡುತ್ತಿದ್ದನು. ಇದನ್ನು ಭವಿಷ್ಯತ್ ಪುರಾಣದಲ್ಲಿ "ಚಂದ್ರಕೇತುಸ್ತುಃ ನೃಪತಿಃ ಯವಾನೀ ಬೌದ್ಧ ತತ್ಪರಃ" ಎಂದು ಉಕ್ತ ವಾಗಿದೆ. ವಿಲ್ಯಂ ಜೋನ್ಸನು ಮಾತ್ರ "ಚಂದ ಕಂಡವನನ್ನು ಗಂಡನೆಂದು"ಕೊಂಡಂತೆ ಮೌರ್ಯ ಚಂದ್ರಗುಪ್ತನನ್ನು ಮೆಗಸ್ತನೀಸನ ಹೆಂಡ್ರಾಕೋಟಸನೆಂದು ಮಾಡಲು ಪ್ರಸ್ಸೀದೇಶ=ಪ್ರಾಚ್ಯದೇಶ, ಪಾಲಿವೊಥ್ರಾ=ಪಾಟಲೀ ಪುತ್ರ, ಹೆಂಡ್ರಾಕೋಟಸ್= ಚಂದ್ರಗುಪ್ತ--ಹೀಗೆ ಅರ್ಥ ಹಚ್ಚಿ ತದ್ಭವ ಪದಗಳೆಂದು ತನ್ನ ಲೇಖನದಲ್ಲಿ ತೋರಿ ಸಿರುವನು. ಮತ್ತು ಮೆಗಸ್ತನೀಸನ ಲೇಖನದೊಳಗಿನ ಅನುಕೂಲ ಸಂಗತಿಗಳನ್ನು ಮಾತ್ರ ಎತ್ತಿ ಹಿಡಿದು, ಪ್ರತಿಕೂಲ ಸಂಗತಿಗಳನ್ನು ಮುಚ್ಚಿಬಿಡುತ್ತಿದ್ದನು.

1. ಪಾಟಲೀಪುತ್ರವು ಗಂಗಾ-ಯಮುನಾ ಸಂಗಮದಿಂದ 200 ಮೈಲು ಪಶ್ಚಿಮಕ್ಕಿಲ್ಲ—ಪೂರ್ವಕ್ಕಿದೆ.

2. ಪಾಟಲೀಪುತ್ರವು ಶೈಶುನಾಗ ವಂಶದ "ಉದಾಯಿ" ಎಂಬಾತನಿಂದ ಸ್ಥಾಪಿತವಾಗಿದೆ. ಹೀರಾಕ್ಲೀಜನಿಂದಲ್ಲ.

3. ಮೆಗಸ್ತನೀಸನ ಹೆಂಡ್ರಾಕೋಟಸನು ಹೀರಾಕ್ಲೀಜನಿಂದ 138ನೇ ತಲೆಯವನು. ಮೌರ್ಯ ಚಂದ್ರಗುಪ್ತನು ಶ್ರೀಕೃಷ್ಣ ಸಮಕಾಲೀನ. ಜರಾಸಂಧ, ಸಹದೇವರಿಂದ 48ನೇ ತಲೆಯವನಾಗುತ್ತಾನೆ.—138ನೇಯವನು ಅಲ್ಲ.

4. ಹೀರಾಕ್ಲೀಜನಿಂದ ಹೆಂಡ್ರಾಕೋಟಸನು 2760 ವರ್ಷದ ನಂತರದವನು.

5. ಮೌರ್ಯ ಚಂದ್ರಗುಪ್ತರು ಶ್ರೀಕೃಷ್ಣ ಸಮಾನಕಾಲದ ಜರಾಸಂಧ, ಸಹದೇವರಿಂದ 1500 ವರ್ಷಗಳ ನಂತರದವನು.

ಈ 5 ಕಾರಣಗಳಿಂದ ಮೌರ್ಯ ಚಂದ್ರಗುಪ್ತ ಮೆಗಸ್ತನೀಸನ ಹೆಂಡ್ರಾಕೋಟಸ
ಒಂದಲ್ಲ ಮತ್ತು ಚಂದ್ರಗುಪ್ತ ಮೌರ್ಯನ ರಾಜ್ಯ ಸಿಲೋನ ತನಕ ವ್ಯಾಪಿಸಿತ್ತು.
ಚೌಕ ವಿರಲಿಲ್ಲ. ಹೆಂಡ್ರಾಕೋಟಸನ ರಾಜ್ಯ ಚೌಕವಿತ್ತು. ಮೆಗಸ್ತನೀಸನ ಲೇಖನ
ದಲ್ಲಿ ಚಾಣಕ್ಯನ ಉಲ್ಲೇಖ ಇಲ್ಲದ್ದು ಯುರೋಪದ ಪಂಡಿತರಿಗೆ ಆಶ್ಚರ್ಯಕರವಾಗಿದೆ.
ಆದರೆ ಮೆಗಸ್ತನೀಸನ ಹೆಂಡ್ರಾಕೋಟಸನು ಮೌರ್ಯ ಚಂದ್ರಗುಪ್ತನಲ್ಲದುದರಿಂದ ಆ
ಕಾಲದಲ್ಲಿಲ್ಲದ ಚಾಣಕ್ಯನ ಉಲ್ಲೇಖ ಮೆಗಸ್ತೀನನ ಲೇಖನದಲ್ಲಿರುವ ಸಂಭವವಿಲ್ಲ.
ಈ ರೀತಿಯಾಗಿ ಗತ ಕಲಿ 16ನೇ ಶತಕದ ಮೌರ್ಯ ಚಂದ್ರಗುಪ್ತನನ್ನು 28ನೇ
ಶತಕದ ಹೆಂಡ್ರಾಕೋಟಸನನ್ನು ಮಾಡಿ, ಕಾಲಗಣನೆಯಲ್ಲಿ 12 ಶತಮಾನವನ್ನೇ ಕಡಿತ
ಮಾಡಿ ಭಾರತದ ಇತಿಹಾಸದ ಮೇಲೆ ದೊಡ್ಡ ಅನ್ಯಾಯಮಾಡಿದಂತಾಗಿದೆ. ಇದ
ರಿಂದಾಗಿ B. C. 4ನೇ ಶತಕದಲ್ಲಿರಬೇಕಾದ ಗುಪ್ತವಂಶದ ರಾಜರು A. D. 4ನೇ
ಶತಕದಲ್ಲಿರಬೇಕಾಯಿತು. ಶಕಕರ್ತರಾದ ವಿಕ್ರಮಾದಿತ್ಯ ಶಾಲಿವಾಹನ ಮೊದಲಾದ
ಮಹಾಪುರುಷರು ಭಾರತದ ಇತಿಹಾಸದಲ್ಲಿ ಕಣ್ಮರೆಯಾದರು. ಇದರಂತೆ ಇನ್ನೊಬ್ಬ
ಪಂಡಿತರು ಪ್ರಿನ್ಸೆಫ್ ಎಂಬವರು ಅಶೋಕ ರಾಜನ ಶಾಸನಗಳು ಎಂದು 14 ಶಾಸನ
ಗಳನ್ನು ಎತ್ತಿ ಹಿಡಿದು ತೋರಿಸಿ ಅದರಲ್ಲಿ ಉಲ್ಲೇಖಿಸಿದ ಅಂತಓಕಸ್ಸ ತುರಮೇಯ
ಅಲೇಖ್ಯಸುಂದರ ಎಂದು ಮುಂತಾದ ದೇಶವಾಚಕ ಹೆಸರನ್ನು ಅಂಟಿ ಓಕಸ್, ಟಾಲೇಮಿ,
ಅಲೆಕ್ಸಾಂಡರ್ ಮೊದಲಾದ ಗ್ರೀಕ ರಾಜರ ಹೆಸರೆಂದು ಬದಲಾವಣೆ ನಡೆಯಿಸಿ, ಅಶೋಕ
ರಾಜನು ಸದರಿ ರಾಜರುಗಳ ನಂತರದವನೆಂದು ವ ಸಮಾನಕಾಲದವನೆಂದು ಸಿದ್ಧ
ಮಾಡಿ ತೋರಿಸಲು ಉಪಕ್ರಮಿಸಿದನು. ಸದರಿ ಶಾಸನಗಳಲ್ಲಿ ಮೊದಲನೇದಾಗಿ
ಅಶೋಕನೆಂಬ ಹೆಸರೇ ಇಲ್ಲವೆಂಬ ತಕರಾರು ಪಂಡಿತರಲ್ಲಿ ನಡೆದದೆ ಮತ್ತು ಆ ಶಾಸನ
ಗಳಲ್ಲಿ ಕಾಲನಿರ್ದೇಶವೇ ಇರುವುದಿಲ್ಲ ಮತ್ತು ಯಾವನೊಬ್ಬ ಬೌದ್ಧನೂ ಹಚ್ಚಿಕೊಳ್ಳ
ಬಹುದಾದ "ಪ್ರಿಯದರ್ಶಿ ದೇವಾನಾಂ ಪ್ರಿಯಃ" ಎಂಬ ವಿಶೇಷಣ ಮಾತ್ರವಿದ್ದು

ಅಶೋಕ ರಾಜನ ಶಾಸನಗಳೇ ಎಂಬುದನ್ನು ತೀರ್ಮಾನಿಸಲು ಸಹ ಸಾಧ್ಯವಿಲ್ಲವಾಗಿವೆ. ಇಂಥ ಅಸಮರ್ಥನೀಯ ಆಧಾರ ಸ್ತಂಭಗಳ ಮೇಲೆ ಭಾರತೀಯ ಇತಿಹಾಸದ ಕಾಲ ಗಣನೆಯು ಇಮಾರತು ರಚಿಸಲಾಗಿದೆ ಮತ್ತು ದೃಢಮೂಲವಾದ ಭಾರತೀಯ ಇತಿಹಾಸ ಪುರಾಣಗಳ ನಿರ್ದೇಶವನ್ನು ಧಿಃಕರಿಸಲಾಗುತ್ತದೆ.

## ಉಡುಪಿ ಶ್ರೀಕೃಷ್ಣ ಮಠ

ಗೋಪಿಕಾಪ್ರಣಯಿನಃ ಶ್ರಿಯಃ ಪತೇಃ ಆಕೃತಿಂ ದಶಮತಿಃ ಶಿಲಾಮಯೀಂ ।
ಶಿಷ್ಯಕೈಃ ತ್ರಿಚತುರೈಃ ಜಲಾಶಯೇ ಶೋಧಯನ್ನಿಹ ತತೋ ವ್ಯಗಾಹಯತ್ ॥ ೧ ॥
ಸ್ಪರ್ಶನಾತ್ ಭಗವತೋಽತಿಪಾವನಾತ್ ಸನ್ನಿಧಾನಪದತಾಂ ಗತಾಂ ಹರೇಃ ।
ತ್ರಿಂಶದುದ್ಯತನರೈಃ ಸುದುರ್ಧರಾಂ ಲೀಲಯಾನಯದಿಮಾಮಸೌ ಮಠಂ ॥ ೨ ॥
ಮಂದಹಾಸ ಮೃದು ಸುಂದರಾನನಂ ನಂದನಂದನಮತೀಂದ್ರಿಯಾಕೃತಿಂ ।
ಸುಂದರಂ ಸ ಇಹ ಸನ್ಯಧಾಪಯತ್ ವಂದ್ಯಮಾಕೃತಿಶುಚಿಪ್ರತಿಷ್ಠಯಾ ॥ ೩ ॥

1. ಮಧ್ವವಿಜಯದ 9ನೇ ಸರ್ಗದ ಈ ಮೂರು ಶ್ಲೋಕಗಳಲ್ಲಿ ಶ್ರೀಮಧ್ವಾಚಾರ್ಯರು ತನ್ನ ಸ್ವಂತ ಮಠದಲ್ಲಿ ಶ್ರೀಕೃಷ್ಣನ ಪ್ರತಿಮೆಯನ್ನು ಪ್ರತಿಷ್ಠಾ ಮಾಡಿದ ಉಲ್ಲೇಖವಿವೆ. ಶ್ರೀಮಧ್ವವಿಜಯವು ಶ್ರೀಮಧ್ವಾಚಾರ್ಯರ ಕಾಲದಲ್ಲಿಯೇ ಬರೆದು ಮುಗಿಸಿದ ಗ್ರಂಥವಾಗಿದೆ. ಅದರಲ್ಲಿ ಶ್ರೀಮದಾಚಾರ್ಯರ ಅಂತ್ಯದ ಕುರಿತು ಯಾವ ತರದ ಉಲ್ಲೇಖವಿರುವುದಿಲ್ಲ. ಆದುದರಿಂದ ಸನ್ 1278ನೇ ಇಸವಿಯ ಪ್ರಾಚೀನ ಗ್ರಂಥದ ಆಧಾರದಿಂದ ಶ್ರೀಮದಾಚಾರ್ಯರಿಂದ ಶ್ರೀಕೃಷ್ಣ ಪ್ರತಿಷ್ಠಾ ಉಡುಪಿಯಲ್ಲಿ ಆಗಿಯದೆ.

2. ಶ್ರೀಮಧ್ವಾಚಾರ್ಯರ ಪ್ರಥಮ ಶಿಷ್ಯರಾದ ಶ್ರೀಹೃಷೀಕೇಶ ತೀರ್ಥರಿಂದ ರಚಿತವಾದ ಸಂಪ್ರದಾಯ ಪದ್ಧತಿಯೆಂಬ ಗ್ರಂಥದಲ್ಲಿ ಸಹ ಕೆಳಗಿನ ಶ್ಲೋಕವನ್ನು ಕಾಣಬಹುದು.

ಪಾರಿವ್ರಾಜ್ಯಂ ತತಃ ಪ್ರಾಪ್ಯ ಕೃತ್ವಾ ಸಚ್ಛಾಸ್ತ್ರ ಸಂಚಯಂ ।
ರೂಪ್ಯೇ ಕೃಷ್ಣಾಕೃತಿಂ ವಾಯುಃ ಸಂಸ್ಥಾಪ್ಯಾದಾತ್ ಸತಾಂ ಮುದಂ ॥ ೪ ॥

ಇದರಲ್ಲಿ ವಾಯುದೇವರ ಅವತಾರವಾದ ಶ್ರೀಮದಾಚಾರ್ಯರು ರೂಪ್ಯಪೀಠದಲ್ಲಿ ಕೃಷ್ಣ ಪ್ರತಿಮೆಯನ್ನು ಪ್ರತಿಷ್ಠಾಪಿಸಿ ಸಜ್ಜನರಿಗೆ ಸಂತೋಷಪಡಿಸಿದರು—ಎಂತ ಬರೆದದೆ. ಈ ಗ್ರಂಥವು 7 ನೂರು ವರ್ಷದ ಹಿಂದಿನ ಗ್ರಂಥವು.

3. ಮಂದಾರಮರಂದ ಚಂಪೂ ಗ್ರಂಥದಲ್ಲಿ ಸಹ ಸಾರಬಿಂದು ಎಂಬ ಪ್ರಕರಣದಲ್ಲಿ ಶ್ರೀಮಧ್ವಾಚಾರ್ಯರಿಂದ ಶ್ರೀಕೃಷ್ಣ ಪ್ರತಿಷ್ಠಾ ಮಾಡಿದ ಚರಿತ್ರೆ ಸವಿಸ್ತರ ಉಕ್ತವಾಗಿದೆ. ಈ ಗ್ರಂಥ ಬರೆದು 3 ನೂರು ವರ್ಷಗಳಾಗಬಹುದು.

4. ಮದ್ರಾಸು ಓರಿಯಂಟಲ್ ಲೈಬ್ರೆರಿಯಲ್ಲಿರತಕ್ಕ ಮ್ಯಾನಸ್ಕ್ರಿಪ್ಟಿನ ದಾಖಲೆ ಯಿಂದ "ಶಾಲಿವಾಹನ ಶಕ 1160ನೇ ಹೇಮಲಂಬೀ ಸಂವತ್ಸರದ ಮಾಘ ಶುದ್ಧ ತೃತೀಯಾ ದಿವಸ ಶ್ರೀಉಡುಪಿ ಕ್ಷೇತ್ರದಲ್ಲಿ ಶ್ರೀಮಧ್ವಾಚಾರ್ಯರು ಶ್ರೀಕೃಷ್ಣ ಪ್ರತಿಷ್ಠೆ ನೆರವೇರಿಸಿದರು" ಎಂದು ಬರೆದಿದೆ.

5. ಮತ್ತು ಈ 700 ವರ್ಷಗಳಿಂದ ಭಾರತದ ಪ್ರಾಯಶಃ ಸಕಲ ಜನರಲ್ಲಿ ವಿಶೇ ಷತಃ ಮಾಧ್ವರಲ್ಲಿ ಶ್ರೀಕೃಷ್ಣ ಪ್ರತಿಷ್ಠೆಯು ಶ್ರೀಮಧ್ವಾಚಾರ್ಯರಿಂದ ನೆರವೇರಿಸಿಯದೆ ಎಂತ ಅಬಾಧಿತ ಪ್ರತೀತಿ ಇದೆ.

6. ಪುರಂದರಾದಿ ದಾಸರುಗಳ ಪದ್ಯಗಳಲ್ಲಿ ಉಲ್ಲೇಖನಗಳಿವೆ—ಈ ಪೂರ್ವೋಕ್ತ ಕಾರಣಗಳಿಂದ ಉಡುಪಿಯಲ್ಲಿ ಶ್ರೀಕೃಷ್ಣನನ್ನು ಶ್ರೀಮಧ್ವಾಚಾರ್ಯರು ಪ್ರತಿಷ್ಠೆ ಮಾಡಿ ದರು—ಇದರಲ್ಲಿ ಸಂಶಯವಿರಲಾರದು. ಹೀಗಿರುವಾಗ "ಶ್ರೀಮಧ್ವಾಚಾರ್ಯರು ಪ್ರತಿಷ್ಠೆ ಮಾಡಲಿಲ್ಲ, ಸೋದೆ ಶ್ರೀವಾದಿರಾಜರು ಪ್ರತಿಷ್ಠೆ ಮಾಡಿದರು" ಎನ್ನುವುದು ಸಾಹಸದ ಮಾತು. ಶ್ರೀ ಅಚ್ಯುತ ಶರ್ಮರು ಪು. 40ರಲ್ಲಿ "ಶ್ರೀಕೃಷ್ಣ ಮಠವು ಮಧ್ವಾ ಚಾರ್ಯರ ಕಾಲದಲ್ಲಿ ಸ್ಥಾಪಿಸಲ್ಪಡಲಿಲ್ಲ. "ಈ ಮಾಧ್ವ ಮಠವು ವಾದಿರಾಜರ ಕಾಲ ದಲ್ಲಿ ಅದರ ಅಡಿಸ್ಥಳವನ್ನು ಗೇಣಿಗೆ ಪಡಕೊಂಡು ಕಟ್ಟಿಸಿರಬೇಕೆಂದು ತಿಳಿಯಬೇಕಾ ಗುತ್ತದೆ.?" ಎಂದು ಬರೆಯುವಾಗ ಯಾವುದೋ ಒಂದು ಭಾವನಾತರಂಗದಲ್ಲಿ ತೇಲು ತ್ತಿದ್ದಾರೆನ್ನಬಹುದು.

ಶ್ರೀಕೃಷ್ಣ ಪ್ರತಿಷ್ಠೆ ಮಾಡಿದ ಸ್ಥಳವು ಮೊದಲು ಮಠವಾಗಿತ್ತೋ? ದೇವಸ್ಥಾನ ವಾಗಿತ್ತೋ? ಎಂಬುದೊಂದು ಪ್ರಶ್ನೆಯನ್ನು ಉಂಟುಮಾಡಲಾಗಿದೆ. ಅದರ ಪೈಕಿ ಮಠವೆಂಬುದಕ್ಕೆ ಸಾಧಕವಾದ ಪ್ರಮಾಣಗಳು ಕೆಳಗಿನಂತಿವೆ.

(೧) ಪೂರ್ವೋಕ್ತ ಸುಮಧ್ವ ವಿಜಯದ 9-42ನೇ ಶ್ಲೋಕದಲ್ಲಿ "ಆನಯದಿ ಮಾಮಸೌ ಮಠಂ" ಎಂಬುದಾಗಿ ಶ್ರೀಕೃಷ್ಣ ಪ್ರತಿಮೆ ತರುವುದಕ್ಕೆ ಮೊದಲೇ ಮಠ ವೆಂಬುದಾಗಿ ಉಲ್ಲೇಖ ಮಾಡಿದ್ದು ಕಂಡುಬರುತ್ತದೆ. ಮೊದಲು ಮಠವಾಗಿದ್ದುದು ತದನಂತರವೂ ಮಠವೇ.

(೨) ಸನ್ಯಾಸಿಗಳು ದೇವರು ಇಟ್ಟುಕೊಂಡು ಪೂಜೆ ಮಾಡುತ್ತಿರುವ ಕಟ್ಟಡಗಳು "ಮಠ"ವೆನಿಸಿಕೊಳ್ಳುತ್ತದೆ. ಗೃಹಸ್ಥಾಶ್ರಮಿಗಳು ಸಾರ್ವಜನಿಕ ಗ್ರಾಮದೇವರನ್ನು ಪೂಜೆ ಮಾಡಿಕೊಂಡಿರುವ ಸ್ಥಳಗಳು ದೇವಸ್ಥಾನವಾಗುತ್ತವೆ. ಶ್ರೀಕೃಷ್ಣನು ಇರು ತ್ತಿರುವ ಸ್ಥಳವು ಪ್ರತಿಷ್ಠೆ ಆದಮೇಲೆ ಸಹ ಇವತ್ತಿನ ವರೆಗೆ ಸನ್ಯಾಸಿಗಳೇ ಶ್ರೀಕೃಷ್ಣ ನನ್ನು ಪೂಜಿಸುತ್ತಾ ಇರುತ್ತಾರೆ. ಗೃಹಸ್ಥಾಶ್ರಮಿಗಳಲ್ಲ. ಆದುದರಿಂದ ದೇವಸ್ಥಾನ ವಾಗಲಾರದು.

(೩) ಬಲಿಕಲ್ಲುಗಳು, ದೊಡ್ಡ ಬಲಿಪೀಠ, ಧ್ವಜಸ್ತಂಭ, ವಗ್ಯೆರೆ ಇರುತ್ತಿದ್ದು, ಬಲಿ, ಉತ್ಸವ ವಗ್ಯೆರೆ ನಡೆಯುವ ಸ್ಥಳ ದೇವಸ್ಥಾನವೆಂದು ಕರೆಯಲ್ಪಡುತ್ತದೆ. ಬಲಿಕಲ್ಲುಗಳು,

ಧ್ವಜಸ್ತಂಭವಿಲ್ಲದಿರುವ ಮತ್ತು ಉತ್ಸವ ಪೂಜೆ ವಗೈರೆ ನಡೆಯುತ್ತಿರುವ ಸ್ಥಳವು ಮಠವು.

(೪) ಜೈನ ಸನ್ಯಾಸಿಗಳು ತಂಗುವ ಸ್ಥಳಗಳು ಬಸದಿಗಳು, ಬೌದ್ಧ ಸನ್ಯಾಸಿಗಳು ಇರುವ ಸ್ಥಳವು ವಿಹಾರಗಳು. ಇವುಗಳೆರಡರಲ್ಲಿ ದೇವರು ಇರುವುದಿಲ್ಲ. ಬಸದಿಯಲ್ಲಿ ಗುರುಗಳ ಮೂರ್ತಿ ಮಾತ್ರ ಇರುತ್ತದೆ. ಅವರೀರ್ವರೂ ನಿರೀಶ್ವರವಾದಿಗಳು. ದೇವರ ನ್ನೊಪ್ಪುವುದಿಲ್ಲ. ಇನ್ನು ವೈದಿಕ ಸನ್ಯಾಸಿಗಳು ಇರುವ ಸ್ಥಳಗಳೇ ಮಠಗಳು. ಅಲ್ಲಿ ಅವರು ತಮ್ಮ ಉಪಾಸ್ಯ ಮೂರ್ತಿಯನ್ನು ಸ್ಥಿರವಾಗಿ ಪ್ರತಿಷ್ಠಿಸಿ, ಪೂಜೆ ಮಾಡುತ್ತಾರೆ. ಅಥವಾ ಪ್ರತಿಷ್ಠೆ ಮಾಡದೆ ಚಲಮೂರ್ತಿಗಳನ್ನು ಪೂಜೆ ಮಾಡುತ್ತಾರೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪೀಠಾಧಿಪರ ಮಠಗಳನ್ನು ಉದಾಹರಣೆಗೆ ತೆಗೆದುಕೊಳ್ಳ ಬಹುದು.

೫. ಪೂಜಾಸಮಯದಲ್ಲಿ ಡೋಲು, ಘಂಟೆ, ಪಟಹ, ಕೊಂಬು, ಊದುವ ಬಾರಿಸುವ ಸ್ಥಳಗಳು ದೇವಸ್ಥಾನ. ನಗರಿ, ತುತ್ತೂರಿ, ರಣಗಳೆ, ಇವು ಊದುತ್ತಿರುವ ಸ್ಥಳಗಳು ಮಠಗಳು. ನವಹೊತ್ತು ನಗಾರಿ ಮೊದಲಾದ ಗೌರವವು ಅರಸರ ಸ್ಥಾನದಲ್ಲಿರುತ್ತಿದ್ದುವು ಗಳು. ಇವು ಅರಸರಿಂದ ಮಠಾಧಿಪತಿಗಳಿಗೆ ಬಹುಮಾನವಾಗಿ ಪ್ರಾಪ್ತವಾದ ಮರ್ಯಾದೆ ಗಳಾಗಿರುತ್ತವೆ.

೬. ಶ್ರೀಕೃಷ್ಣ ದೇವರಿಗೆ ಭಕ್ತಾದಿಗಳಿಂದ ಮತ್ತು ಸಂಸ್ಥಾನಿಕರುಗಳಿಂದ ಅನೇಕ ತರದ ಆಸ್ತಿಗಳು ದಾನವಾಗಿ ಬಂದವುಗಳು ಇರುತ್ತವೆ. ಅವುಗಳ ದಾನಪತ್ರಗಳಲ್ಲಿ ಶ್ರೀಕೃಷ್ಣ ದೇವಸ್ಥಾನವೆಂದಿಲ್ಲ. ಶ್ರೀಕೃಷ್ಣ ಮಠವೆಂದೇ ಇರುತ್ತದೆ. ಪರಿಶಿಷ್ಟದಲ್ಲಿ ಕೆಲವು ಉದಾಹರಣೆಗಳನ್ನು ಕಾಣಬಹುದು.

೭. ಸರ್ವಸಾಧಾರಣ 200 ವರ್ಷಗಳಿಂದ ಈಚೆಗೆ ಇರುವ, ಕಾಣಸಿಗುವ, ಕಾಗದ ಪತ್ರಗಳು, ಶ್ರೀಕೃಷ್ಣ ದೇವರ ಮಠದಿಂದ ಹೊರಡುವ ರಾಯಸಗಳು, ಆಜ್ಞಾಪತ್ರಗಳು, ಪೋಸ್ಟು ಪತ್ರಗಳು, ಪ್ರಕಟಣೆಗಳು, ಏನೆಲ್ಲಾ ಇವೆಯೋ, ಅವುಗಳಲ್ಲಿ ದೇವಸ್ಥಾನ ವೆಂದಿರುವುದಿಲ್ಲ. ಮತ್ತು "ಪರ್ಯಾಯ ಶ್ರೀಕೃಷ್ಣ ದೇವರ ಮಠ"ವೆಂಬ ಪದವನ್ನು ಕಾಣಬಹುದು.

೮. "ಸನ್ಯಾಸಿಗಳ ಮಠವಲ್ಲ. ಗೃಹಸ್ಥಾಶ್ರಮಿಗಳ ದೇವಸ್ಥಾನವಾಗಬೇಕೆಂದು" ಬಯಸುವ, ಅಚ್ಯುತ ಶರ್ಮರೇ ತಮ್ಮ ಪುಸ್ತಕದಲ್ಲಿ ಬಹಳ ಜಾಗ್ರತೆಯಿಂದ ಶ್ರೀಕೃಷ್ಣ ಮಂದಿರವೆಂದೇ ಬರೆಯುತ್ತಿರುವುದು ಸಹ ಲೋಕರೂಢಿಯನ್ನು ಮೀರಲಾರದೆ ಅಪ್ಪಿತಪ್ಪಿ ಶ್ರೀಕೃಷ್ಣ ಮಠವೆಂಬ ಪದವನ್ನು ಅನೇಕಾವರ್ತಿ ಬರೆದದ್ದುಂಟು. ಪು. 11, 16, 22, 39, 40, ಪುಟಗಳಲ್ಲಿ ಕಾಣಬಹುದು. ಶ್ರೀಕೃಷ್ಣ ಮಠವೆಂಬ ಶಿರೋಲೇಖನ 2 ಸರ್ತಿ ಬರೆದದ್ದು ಬೇರೆ ಇದೆ. ಇದು ಏನನ್ನು ಸೂಚಿಸುತ್ತದೆ ಎಂದರೆ ಬಹುಕಾಲದ ಪ್ರಾಚೀನ ರೂಢಿ ಶ್ರೀಕೃಷ್ಣ ಮಠವೆಂದೇ ಇತ್ತು ಎಂದು. ಅಲ್ಲವೇ?

೯. (ಪು. 40ರಲ್ಲಿ) "ಶ್ರೀಕೃಷ್ಣ ಮಠವು ಸಾರ್ವಜನಿಕರಿಂದ ಪೂಜಿಸಲ್ಪಡುವ ದೇವಸ್ಥಾನ. ಇದು ಮದ್ರಾಸ್ ಆಕ್ಟ್ V. of 1947ರಲ್ಲಿ ಹೇಳಿದ ಪ್ರಕಾರ ದೇವಸ್ಥಾನ ಪದದ ವಿವರಣೆಗೆ ಒಳಪಟ್ಟಿದ್ದಾಗಿದೆ. ಆದುದರಿಂದ ಈ ಸಂಸ್ಥೆಯು ಮಠವಲ್ಲ, ದೇವಸ್ಥಾನ ಎಂದು ಪರಿಗಣಿಸಲ್ಪಡಬೇಕು". ಈ ಪ್ರಕಾರ ಸುಪ್ರೀಂ ಕೋರ್ಟು ತೀರ್ಪು ಎಂದು ಬರೆದಿದೆ. ಕಾಂಗ್ರೆಸ್ ಸರಕಾರದಲ್ಲಿ ಶಾಸ್ತ್ರರೀತ್ಯಾ ಹರಿಜನರ ಪ್ರವೇಶಕ್ಕೆ ನಿಷೇಧವಿದ್ದ ದೇವಾಲಯಗಳಿಗೆ ಹರಿಜನರ ಪ್ರವೇಶ ಮಾಡಿಸಬೇಕೆಂದು 1947ರಲ್ಲಿ ಒಂದು ಕಾಯಿದೆ ಮಾಡಿಯದೆ. ಅದರಲ್ಲಿ ವ್ಯಾಪಕವಾಗಿ ದೇವಸ್ಥಾನ ಪದದ ಅರ್ಥವರ್ಣನೆ ಇದೆ. ಅದರ ಪ್ರಕಾರ ಶ್ರೀಕೃಷ್ಣ ಮಠವು ಆರಂಭದಿಂದಲೂ, ಸನ್ಯಾಸಿಗಳ ಮಠವಾಗಿತ್ತಾದರೂ ಬರಬರುತ್ತಾ ಸಾರ್ವಜನಿಕರು ಬಂದು ಹೋಗುವ ಸ್ಥಳವಾಗಹತ್ತಿದ್ದರಿಂದ ಇದೀಗ ಮದ್ರಾಸ್ ಆಕ್ಟ್ ಪ್ರಕಾರ ಹರಿಜನರು ಪ್ರವೇಶಿಸಬಹುದಾದ ದೇವಸ್ಥಾನವೆಂದು ಪರಿಗಣಿಸಲ್ಪಡಬೇಕು. ಹರಿಜನ ಪ್ರವೇಶಕ್ಕೆ ತಡೆಯುಳ್ಳ ಮಠವಾಗಬಾರದು. ಅಂತೂ ಶ್ರೀಕೃಷ್ಣ ಮಠಕ್ಕೆ ಹರಿಜನರ ಪ್ರವೇಶವಾಗಬಾರದೆಂಬ ತಡೆ ಇರಕೂಡದು. ಇದಿಷ್ಟೇ ಸುಪ್ರೀಂ ಕೋರ್ಟಿನ ಅಭಿಪ್ರಾಯವೆಂದು ಅಚ್ಯುತ ಶರ್ಮರು ಬರೆದಿರುವ ವಾಕ್ಯಗಳ ಮೇಲಿಂದ ಅರ್ಥವಾಗುತ್ತದೆ. ಅಲ್ಲದೆ ಸನ್ಯಾಸಿಗಳು ಪೂಜೆ ಮಾಡಬಾರದು, ಗೃಹಸ್ಥಾಶ್ರಮಿಗಳು ಪೂಜೆ ಮಾಡಬೇಕು, ನವಹೊತ್ತು ನಗಾರಿ ತೆಗೆದುಹಾಕಬೇಕು, ದೋಲು, ಘಂಟೆ ಇಡಬೇಕು, ಬಲಿಕಲ್ಲು ಹಾಕಬೇಕು, ಧ್ವಜಸ್ತಂಭ ನೆಡಬೇಕು, ಹೀಗೆ ಸುಪ್ರೀಂ ಕೋರ್ಟು ತೀರ್ಪಿನ ತಾತ್ಪರ್ಯವಲ್ಲ. ಮತ್ತು ಇನ್ನೂ ತನಕ ಶ್ರೀಕೃಷ್ಣ ಮಠದಲ್ಲಿ ಪೂರ್ವೋಕ್ತ ಅಂಥ ಯಾವ ಬದಲಾವಣೆಯೂ ಆಗಿರುವುದಿಲ್ಲ. ಇದರಿಂದ ದೇವಸ್ಥಾನ ಪದದ ಶಾಸ್ತ್ರೀಯ ವ್ಯಾಖ್ಯಾನ ಬೇರೆ, ಮದ್ರಾಸ್ ಆಕ್ಟಿನ ವ್ಯಾಖ್ಯಾನ ಬೇರೆ, ಎಂದು ಸಿದ್ಧವಾಯಿತು. ಮದ್ರಾಸ್ ಆಕ್ಟಿನ ದೇವಸ್ಥಾನ ಪದದ ವ್ಯಾಖ್ಯಾನದಿಂದ ಶ್ರೀಕೃಷ್ಣ ಮಠವು, ಹರಿಜನ ಪ್ರವೇಶ ಇರಬೇಕಾಗಿ ಬಂದರೂ, ಶಾಸ್ತ್ರೀಯ ದೇವಸ್ಥಾನವಾಗಿ ಬದಲಾವಣೆಯಾಗಬೇಕಾಗಿಲ್ಲ. ಸಾಂಪ್ರದಾಯಕ ಮಠವಾಗಿಯೇ ಉಳಿಯಬಹುದು. ಶರ್ಮರು ಸುಪ್ರೀಂ ಕೋರ್ಟು ತೀರ್ಪು ತೋರಿಸಿ, ಶಾಸ್ತ್ರೀಯ ದೇವಸ್ಥಾನವಾಗಬೇಕೆಂದು ಬಯಸುತ್ತಾರೆ. ಇದು ಸಾಧ್ಯವಾಗಲಾರದು.

ಸುಪ್ರೀಂ ಕೋರ್ಟಿನ ತೀರ್ಪಿನಿಂದ ಶರ್ಮರು ಶ್ರೀಕೃಷ್ಣ ಮಠವು ಇನ್ನು ಮೇಲೆ ದೇವಸ್ಥಾನವಾಗಬೇಕೆನ್ನುತ್ತಾರೋ? ಮೊದಲೇ ದೇವಸ್ಥಾನವಾಗಿತ್ತು ಎಂದು ಸಿದ್ಧಪಡಿಸಲು ಹೊರಟಿರುವರೋ? "ಶ್ರೀಕೃಷ್ಣ ಮಠವು ಮಧ್ವಾಚಾರ್ಯರ ಕಾಲದಲ್ಲಿ ಸಾರ್ವಜನಿಕ ದೇವಸ್ಥಾನವಾಗಿತ್ತು ಎಂಬುದಾಗಿ ಸುಪ್ರೀಂ ಕೋರ್ಟಿನ ತೀರ್ಪಿನಿಂದ ತಿಳಿಯಬೇಕಾಗುತ್ತದೆ" ಎನ್ನುತ್ತಾರೆ. ಕಾರಣ ತೀರ್ಪಿನಿಂದ ಇನ್ನು ಮೇಲೆ ದೇವಸ್ಥಾನವೆಂದು ಸಾಧಿಸುವ ಅಭಿಪ್ರಾಯ ಶರ್ಮರಿಗೆ ಇರಲಾರದು. ಸದರಿಯವರು 1966ನೇ ಇಸವಿಯ ತೀರ್ಪಿನಿಂದ 1199ಕ್ಕಿಂತ ಪೂರ್ವದಲ್ಲಿ ದೇವಸ್ಥಾನವಾಗಿತ್ತೆಂದು ಸಾಧಿಸಲು ಹವಣಿಸುತ್ತಾರೆ. ಆದರೆ ತೀರ್ಪಿನಲ್ಲಿ 1947ನೇ ಇಸವಿಯ ಆಕ್ಟಿನ ವಿವರಣೆ ಪ್ರಕಾರ

ಇನ್ನು ಮುಂದೆ ದೇವಸ್ಥಾನವೆಂದು "ಪರಿಗಣಿಸಲ್ಪಡಬೇಕು" ಎಂದು ಹೇಳುವ ಅಭಿ ಪ್ರಾಯವಾಗುತ್ತದೆಯಲ್ಲದೆ, ಮಧ್ವಾಚಾರ್ಯರ ಕಾಲದಲ್ಲಿ ದೇವಸ್ಥಾನವಾಗಿತ್ತು ಎಂದು ಅರ್ಥವಾಗುವುದಿಲ್ಲ. ಹಾಗಿದ್ದರೆ "ಪರಿಗಣಿಸಲ್ಪಟ್ಟಿತ್ತು" ಎಂದು ಬರೆಯಬೇಕಲ್ಲವೇ? ಮತ್ತು 1947ನೇ ಆಕ್ಟಿನ ಪ್ರಕಾರ ಸುಮಾರು 1199ನೇ ಇಸವಿಯ ಮಧ್ವಾಚಾರ್ಯರ ಕಾಲದಲ್ಲಿ ದೇವಸ್ಥಾನವಾಗಿತ್ತು ಎಂದು ಸ್ವಸ್ಥಚಿತ್ತನಾದ ಮನುಷ್ಯ ಹೇಗೆ ಶೀಘ್ರ ಬರೆಯುತ್ತಾನೆ?

(ಪೇಜು 39ರಲ್ಲಿ) "ಶ್ರೀಕೃಷ್ಣ ಮಠವು ಮಧ್ವಾಚಾರ್ಯರ ಕಾಲದಲ್ಲಿ ಸಾರ್ವ ಜನಿಕ ದೇವಸ್ಥಾನವಾಗಿತ್ತು" ಎಂದು ಬರೆಯುತ್ತಾರೆ. ಪು. 41ರಲ್ಲಿ "ವಾದಿರಾಜರು ಅಡಿಸ್ಥಳವನ್ನು ಗೇಣಿಗೆ ಪಡಕೊಂಡು ಮಾಧ್ವಮಠವನ್ನು ಕಟ್ಟಿಸಿರಬೇಕು" ಎಂದು ಬರೆಯುತ್ತಾರೆ. ಇದರಲ್ಲಿ ಯಾವದು ಸತ್ಯ? ಅಡಿಸ್ಥಳವನ್ನು ಗೇಣಿಗೆ ಪಡಕೊಂಡು ಮಠವನ್ನು ಕಟ್ಟಿಸಿದ್ದರೆ ಮೊದಲು ಮಧ್ವಾಚಾರ್ಯರ ಕಾಲದಲ್ಲಿ ದೇವಸ್ಥಾನವಾಗಿರಲು ಹೇಗೆ ಶಕ್ಯ? ಅದು ಮೊದಲು ಖಾಲಿ ಸ್ಥಳವಾಗಬೇಕಾಗಿತ್ತು ಅಲ್ಲವೇ? ದೇವಸ್ಥಾನ ವನ್ನು ಮೂಲಗೇಣಿಗೆ ಪಡಕೊಂಡು ದೇವಸ್ಥಾನವನ್ನು ಕೆಡವಿದರು, ಮಠ ಕಟ್ಟಿಸಿದರು. ಎಂದು ಶರ್ಮರು ಹೇಳುವರೇ? ಗೇಣಿಗೆ ಕೊಡುವವರಾದರೂ ಮಠ ಕಟ್ಟಲು ದೇವಸ್ಥಾನವನ್ನು ಹೇಗೆ ಗೇಣಿಗೆ ಕೊಡುತ್ತಾರೆ? ಶರ್ಮರ ತೀರ್ಮಾನದಂತೆ ಗೇಣಿಗೆ ಕೊಡುವವರು ಆಗ ಅನಂತೇಶ್ವರ ದೇವಸ್ಥಾನದ ಅಧಿಕಾರಿಗಳಾದ ಸ್ಥಾನಿಕರೇ ಆಗಿರುವ ರಲ್ಲವೇ? ಸ್ಥಾನಿಕರು ಕೃಷ್ಣಮಠ ಕಟ್ಟಲಿಕ್ಕೆ ತಾವೇ ವೇಣುಗೋಪಾಲಕೃಷ್ಣ ದೇವಸ್ಥಾನ ವನ್ನು ಕೊಟ್ಟು, ಇದೀಗ ಕೃಷ್ಣಮಠ ಕಟ್ಟಿದ ಮೇಲೆ ಬೊಬ್ಬೆ ಹೊಡೆಯುವುದೇಕೆ?

(ಪು. 14ರಲ್ಲಿ) "ಸೋದೆ ಶ್ರೀವಾದಿರಾಜರು ಈಗ ಕೃಷ್ಣಮಠದ ಸ್ಥಳದಲ್ಲಿದ್ದ ವೇಣು ಗೋಪಾಲ ಮತ್ತು ಸುಬ್ರಹ್ಮಣ್ಯ ದೇವರುಗಳ ಗುಡಿ ಮತ್ತು ಕೆರೆಗಳನ್ನು ಬಲಾತ್ಕಾರ ದಿಂದ ತಮ್ಮ ಸ್ವಾಧೀನ ಮಾಡಿಕೊಂಡರೆಂದು ತಿಳಿದುಬರುತ್ತದೆ" ಎಂದು ಶರ್ಮರು ಬರೆಯುತ್ತಾರೆ. ಒಂದು ವೇಳೆ ಬಲಾತ್ಕಾರದಿಂದ ವೇಣುಗೋಪಾಲ ದೇವಸ್ಥಾನವನ್ನು ಆಕ್ರಮಿಸಿ ಅದನ್ನು ಕೆಡವಿ ಶ್ರೀಕೃಷ್ಣ ಮಠವನ್ನು ಕಟ್ಟಿಸಿದ್ದೇ ಆದರೆ ಅನಂತೇಶ್ವರನಿಂದ ಸ್ಥಳವನ್ನು ಗೇಣಿಗೆ ಪಡೆಯುವ ಹವ್ಯಾಸವು ಶ್ರೀವಾದಿರಾಜರಿಗೆ ಏಕೆ ಬೇಕಾಗಿತ್ತು? ಇದೀಗ ಒಂದು ಪ್ರಶ್ನೆ ಏಳುತ್ತದೆ? ಅದೇನೆಂದರೆ, ಶ್ರೀಕೃಷ್ಣ ಮಠ ಕಟ್ಟುವುದರ ಸಲು ವಾಗಿ ಶ್ರೀಕೃಷ್ಣ ಮಠದ ಅಡಿಸ್ಥಳವನ್ನು ಗೇಣಿಗೆ ಪಡಕೊಂಡರೋ? ಸದರಿ ಜಾಗದಲ್ಲಿದ್ದ ಶ್ರೀವೇಣುಗೋಪಾಲ ದೇವಸ್ಥಾನವನ್ನು ಆಕ್ರಮಿಸಿದರೋ? ಶರ್ಮರು ಸಂಶಯ ಬರು ವಂತೆ ವಿರುದ್ಧವಾದ 2 ವಿಷಯಗಳನ್ನು ಮುಂದಿಟ್ಟರೇ ಹೊರತು ನಿರ್ಣಯಿಸಲು ಬೇಕಾದ ಉಪಪತ್ತಿಯನ್ನು ಮುಂದಿಡಲಿಲ್ಲ, ತೀರ್ಮಾನಿಸಲೂ ಇಲ್ಲ. ಒಂದು ವೇಳೆ ಪು. 38ರಲ್ಲಿ ಸುಪ್ರೀಂ ಕೋರ್ಟಿನ ಜಡ್ಜ್‌ಮೆಂಟಿನ ಪಾರಾ 13ರಲ್ಲಿ ಬರೆದಂತೆ ಅನಂತೇ ಶ್ವರ ಮೂಲಿಗಾರ, ಶ್ರೀಕೃಷ್ಣ ಗೇಣಿದಾರ, ಎಂದು ಬರೆಯುವುದರಿಂದ ಶ್ರೀಕೃಷ್ಣ ಮಠದ ಅಡಿಸ್ಥಳವನ್ನು ಗೇಣಿಗೆ ಹಿಡಿದದ್ದೇ ನಿಜವೆಂದಾದರೆ, ಆ ಜಾಗದಲ್ಲಿ ಶ್ರೀವೇಣು

ಗೋಪಾಲನ ದೇವಸ್ಥಾನವಿರಲು ಸಾಧ್ಯವಿಲ್ಲ. ಮತ್ತು ಆಗ ವೇಣುಗೋಪಾಲನ ದೇವಸ್ಥಾನ ಅಲ್ಲಿ ಇತ್ತು ಎಂಬುದಕ್ಕೆ ಯಾವ ದಾಖಲೆಗಳೂ ಇರುವುದಿಲ್ಲ. ತಿರುಗಿ ಮುರುಗಿ ಹೇಳುವುದೆಂದರೆ ಆನಂದಗಿರಿ ಕೃತ ಶಂಕರವಿಜಯದಲ್ಲಿ "ರಜತಪೀಠಾದಿ ಸ್ಥಲೇಷು ಶ್ರೀಕೃಷ್ಣಾದಿ ದೇವತಾಪ್ರತಿಮಾಂ ಕೃತ್ವಾ" ಎಂಬ ವಾಕ್ಯ ಮಾತ್ರ. ಇದರಲ್ಲಿ ಉಡುಪಿಯಲ್ಲಿ ಶ್ರೀಹಸ್ತಾಮಲಕರು ಶ್ರೀಕೃಷ್ಣ ಪ್ರತಿಮೆ ಸ್ಥಾಪಿಸಿದ ಕುರಿತು ಲಿಖಿತವಾಗಿದೆ. ಶ್ರೀಕೃಷ್ಣ ಮಠ ಇದ್ದಲ್ಲಿಯೇ ಸ್ಥಾಪಿಸಿದರು, ಎಂಬದು ಹೇಗೆ ಸಿದ್ಧವಾಯಿತು? ಇದನ್ನು ಶರ್ಮರು ದಾಖಲೆ ಕೊಟ್ಟು ರುಜುವಾತು ಪಡಿಸಬೇಕು. "ಶ್ರೀಕೃಷ್ಣ ಮಠ ಇದ್ದಲ್ಲಿ ಶ್ರೀವೇಣುಗೋಪಾಲಕೃಷ್ಣನನ್ನು ಸ್ಥಾಪಿಸಿದ್ದು ಅಲ್ಲ"ವೆನ್ನಲು ಅದಿಸ್ಥಳವನ್ನು ಗೇಣಿಗೆ ಪಡೆದು ಕೃಷ್ಣಮಠ ಕಟ್ಟಿಸಿದರ ಕುರಿತು ಸುಪ್ರೀಂ ಕೋರ್ಟಿನ ತೀರ್ಪನ್ನು ತೋರಿಸಿ ಬರೆದ ಶರ್ಮರ ವಾಕ್ಯವೇ ಆಧಾರವಾಗುತ್ತದೆ.

ಮೇಲಾಗಿ ಶರ್ಮರು ಪು. 27ರಲ್ಲಿ ಮುದ್ದಣ್ಣ ಬಲ್ಲಾಳರ ಗ್ರಂಥೋದಾಹರಣ ಮಾಡಿ ಸದರಿ ವೇಣುಗೋಪಾಲಕೃಷ್ಣನು ಆಜೊಡಿಪು (ಆದಿ ಉಡುಪಿ) ಯಲ್ಲಿರುತ್ತಿದ್ದ ವಿಚಾರ ಬರೆಯುತ್ತಾರೆ. ಇದರಿಂದ ಹಸ್ತಾಮಲಕರು ಆಜೊಡಿಪು ಎಂಬಲ್ಲಿ ವೇಣು ಗೋಪಾಲಕೃಷ್ಣನ ಪ್ರತಿಮೆಯನ್ನು ಪ್ರತಿಷ್ಠಿಸಿದ್ದಾಗಿಯೂ, ಶ್ರೀಮಧ್ವಾಚಾರ್ಯರು ಶ್ರೀಕೃಷ್ಣ ಪ್ರತಿಷ್ಠಾ ಉಡುಪಿಯಲ್ಲಿ ಮಾಡಿದ್ದಾಗಿಯೂ ತಿಳಿಯಬಹುದಾಗಿದೆ. ಆದುದ ರಿಂದ ಶ್ರೀಮಧ್ವಾಚಾರ್ಯರು ಪ್ರತಿಷ್ಠಾ ಮಾಡಿದ ಕೃಷ್ಣನಿದ್ದ ಸ್ಥಳದಲ್ಲಿ ಪೂರ್ವದಲ್ಲಿ ಹಸ್ತಾಮಲಕರು ವೇಣುಗೋಪಾಲಕೃಷ್ಣನ ಪ್ರತಿಷ್ಠಾ ಮಾಡಿದ್ದರೆಂಬುದೊಂದು ಮಾಧ್ವರ ವಿರುದ್ಧ ಇದೀಗ ಬಂಡು ಎಬ್ಬಿಸಿದ್ದಾಗಿರುತ್ತದೆ. ಇದರಲ್ಲಿ ಮತ್ತೇನೂ ಅರ್ಥವಿರುವುದಿಲ್ಲ ಎಂದು ಖಂಡಿತವಾಗಿಯೂ ಹೇಳಬಹುದು. ವಸ್ತುತಃ ಆಜೊಡಿಪು ಎಂಬಲ್ಲಿಯಾದರೂ ಹಸ್ತಾಮಲಕರು ವೇಣುಗೋಪಾಲಕೃಷ್ಣನ ಪ್ರತಿಮೆಯನ್ನು ಸ್ಥಾಪಿಸಿದ್ದರು ಎನ್ನುವುದಕ್ಕೆ ನಿರವಕಾಶ ಪ್ರಮಾಣವೇನಿದೆ? ಪೂರ್ವೋಕ್ತ ಶಂಕರ ವಿಜಯದ ವಾಕ್ಯದಲ್ಲಿ ಉಪಯೋಗಿಸಿದ ರಜತಪೀಠ ಎಂಬ ಶಬ್ದವು ಆಜೊಡಿಪನ್ನು ನಿರ್ದೇಶಿಸಬಹುದೇ? ಆಜೊಡಿಪುನಲ್ಲಿದ್ದ ವೇಣುಗೋಪಾಲಕೃಷ್ಣನು ಕೇಕುಣ್ಣಾಯ ಮೊದಲಾದ ಕುಲದ ಶಿವಳ್ಳಿ ಬ್ರಾಹ್ಮಣರ ಕುಲದೇವತೆಯಾಗಿರುತ್ತಿದ್ದು ಸದರಿ ದೇವ ಸ್ಥಾನವು ಜಾಂಗ್ಲೀರ ಸೈನ್ಯದ ದಾಳಿಯಿಂದ ಧ್ವಂಸವಾಗಲು ಪುನಃ ಜೀರ್ಣೋ ದ್ಧಾರ ಮಾಡಲು ಆಗ ಅಸಮರ್ಥವಾದ ಅಲ್ಲಿಯ ಉಪಾಸಕ ವರ್ಗವು ಮೊದಲೇ ಕೆರೆ ಯಲ್ಲಿ ಅಡಗಿಸಿಟ್ಟಿದ್ದ ಸದರಿ ದೇವರನ್ನು ಉಡುಪಿ ಶ್ರೀಕೃಷ್ಣ ಮಠದಲ್ಲಿ ತಮ್ಮ ಗುರು ಪೀಠದವರಲ್ಲಿ ವಿಜ್ಞಾಪಿಸಿಕೊಂಡು ತಂದು ಒಪ್ಪಿಸಿ ಇಟ್ಟಿದ್ದಾಗಿರುತ್ತದೆ. ಶತಾಯುಷಿ ಪ್ರಾತಃಸ್ಮರಣೀಯ ಶ್ರೀ ೧೦೮ ಸುಧೀಂದ್ರತೀರ್ಥ ಶ್ರೀಪಾದಂಗಳವರು ಕೇಕುಣ್ಣಾಯ ಕುಲದವರಿದ್ದು ಅವರು ತಮ್ಮ ಕುಲದೇವತೆಯೆಂದೂ ತಮ್ಮ ಪೂರ್ವಜರು ಸುಮಾರು 200 ವರ್ಷಗಳ ಮೊದಲು ಕೃಷ್ಣಮಠದಲ್ಲಿ ತಂದು ಇಟ್ಟರೆಂದೂ ಹೇಳುತ್ತಿರುವುದನ್ನು ನಾವು ಕೇಳಿದ್ದೇವೆ. ಆದುದರಿಂದ ಆಜೊಡಿಪು ಶ್ರೀವೇಣುಗೋಪಾಲಕೃಷ್ಣನು

ಹಸ್ತಾಮಲಕ ಪ್ರತಿಷ್ಠೆಯಲ್ಲ. ಕೇಕುಣ್ಣಾಯ ಮನೆತನದ ಅನೇಕ ಉಪಾಸಕವರ್ಗ ದವರು ಇಂದಿನ ತನಕ ಸದರಿ ವೇಣುಗೋಪಾಲಕೃಷ್ಣನ ಸೇವಾಗಳನ್ನು ಉಡುಪಿ ಶ್ರೀಕೃಷ್ಣದೇವರ ಮಠದಲ್ಲಿ ಶ್ರೀಗಳವರ ಹಸ್ತದಿಂದ ನಡೆಯಿಸುತ್ತಲಿದ್ದಾರೆ.

ಮುದ್ದಣ್ಣ ಬಲ್ಲಾಳರು ತಾವು ಮನಸ್ಸಿನಲ್ಲಿರಿಸಿಕೊಂಡ ಅನೇಕ ತಪ್ಪು ಸಂಗತಿ ಗಳ ಪೈಕಿ ಕೆಲವೊಂದನ್ನು ಮುಂದು ಮಾಡಿ ಕೇಕುಣ್ಣಾಯ ಎಂಬುದರ ಬದಲು ಕುಂಜಿ ತ್ತಾಯರೆಂದೂ, ಸದರಿಯವರು ವೇಣುಗೋಪಾಲಕೃಷ್ಣನನ್ನು ಉಡುಪಿ ಶ್ರೀಕೃಷ್ಣ ಮಠವಲ್ಲಿರಿಸಿದರೆಂದೂ, ಮಾಧ್ವ ಮಠದವರ ಕೂಡಾ ಒಳಸಂಚು ನಡೆಸಿದರೆಂದೂ ಯಾರ ಮೇಲೆಯೋ ಏನನ್ನೋ ಆರೋಪಿಸಿರುತ್ತಾರೆ. "ಶಿಷ್ಯನ್ಮಾತ್ರ ಗೃಹಸ್ಥಸ್ಯ ಧಾವನ್ಮಾತ್ರಃ ಪುರೋಹಿತಃ" ಎಂಬಂತೆ ಅಚ್ಯುತ ಶರ್ಮರೂ ಅದನ್ನು ಅನುವಾದ ಮಾಡಿ ಸಂತೋಷಪಡುತ್ತಾರೆ. ಬನ್ನಂಜೆ ಗೋವಿಂದಾಚಾರ್ಯರು ಶ್ರೀಹಸ್ತಾಮಲಕರು ಸಹ ಕೇಕುಣ್ಣಾಯ ಮನೆತನದವರೆಂದೂ ಆದುದರಿಂದ ಅವರಿಗೆ ಸಹ ಶ್ರೀವೇಣು ಗೋಪಾಲಕೃಷ್ಣ ದೇವರು ಕುಲದೇವರಾಗಿರಬೇಕೆಂದೂ ಹೇಳುತ್ತಿದ್ದಾರೆ. ಇದರಿಂದ ಶ್ರೀಹಸ್ತಾಮಲಕರು ತನ್ನ ಕುಲದೇವತೆಯಾದ ವೇಣುಗೋಪಾಲಕೃಷ್ಣನ ದೇವಸ್ಥಾನದ ಜೀರ್ಣೋದ್ಧಾರ ಮಾಡಿ ಪುನಃ ಪ್ರತಿಷ್ಠಾಪನೆಯನ್ನು ಆಜೊಡಿಪುನಲ್ಲಿ ಮಾಡಿದ್ದಾ ರೆಂದು ಆನಂದಗಿರಿಕೃತ ಶಂಕರವಿಜಯದಲ್ಲಿ ಬರೆದಿರುವ "ರಜತಪೀಠಾದಿ ಸ್ಥಲೇಷು ಶ್ರೀಕೃಷ್ಣಾದಿ ಪ್ರತಿಮಾಂ ಕೃತ್ವಾ" ಎಂಬುದರ ಅರ್ಥವಾಗಬಹುದೋ? ತನ್ನ ಕುಲ ದೇವತೆಯನ್ನು ತಾವು ಪ್ರತಿಷ್ಠಿಸಿದರೆಂದರೆ ಇದಕ್ಕಿಂತ ಹೆಚ್ಚಿನ ಬೇರೆ ಅರ್ಥ ಏನಿರ ಬಹುದು? ಒಂದು ವೇಳೆ ಶ್ರೀಹಸ್ತಾಮಲಕರು ತನ್ನ ವರ್ಚಸ್ಸನ್ನು ಬೀರಿ ಆಜೊಡಿಪು ದಲ್ಲಿರುವ ವೇಣುಗೋಪಾಲಕೃಷ್ಣನ ಪ್ರತಿಮೆಯನ್ನು ಶ್ರೀಕೃಷ್ಣ ಮಠ ಇದ್ದಲ್ಲಿ ಉಡುಪಿ ಯಲ್ಲಿ ಪ್ರತಿಷ್ಠಿಸಿದರು ಎಂದರೆ "ಆದಿಉಡುಪಿಯಲ್ಲಿರುತ್ತಿದ್ದ ಆ ಕೃಷ್ಣದೇವರ ವಿಷಯ ಕೂಲಂಕುಷ ವಿಚಾರ ಮಾಡಿದರೆ ಕುಂಜಿತ್ತಾಯರ ಆಟವೂ ಮಧ್ವಾಚಾರ್ಯರ ತಮಾಷೆಗಳೂ ಹೊರಬೀಳುವುದು" ಎಂಬ ಪು. 27ರ ವಾಕ್ಯಕ್ಕೆ ವಿರೋಧ ಬರುತ್ತದೆ. ಇದರಲ್ಲಿ ಶ್ರೀಮಧ್ವಾಚಾರ್ಯರೂ ಮತ್ತು ಕುಂಜಿತ್ತಾಯರೂ ಕೂಡಿ ಒಳಸಂಚು ಹೂಡಿ ಮಹಾರಾಜರ ತಸದೀಕು ಹೇರಳ ಉತ್ಪನ್ನ ಎತ್ತಿಹಾಕುವ ದೆಸೆಯಿಂದ ಆಜೊಡಿಪುದಲ್ಲಿರುವ ವೇಣುಗೋಪಾಲಕೃಷ್ಣನ ಪ್ರತಿಮೆಯನ್ನು ಅಲ್ಲಿಂದ ತಂದು ಕಡ ಗೋಲು ಕೃಷ್ಣನ ಹಿಂದೆ ಅಡಗಿಸಿಟ್ಟರು ಎಂದು ಹೇಳುವ ತಾತ್ಪರ್ಯವಿದೆ. ಇದರಿಂದ ಮಧ್ವಾಚಾರ್ಯರ ತನಕ ಶ್ರೀವೇಣುಗೋಪಾಲನ ಪ್ರತಿಮೆ ಆಜೊಡಿಪುದಲ್ಲಿತ್ತೆಂದು ಸಿದ್ಧ ವಾಗುವುದಿಲ್ಲವೇ? ಒಟ್ಟಾರೆ ಶ್ರೀಮಧ್ವಾಚಾರ್ಯರು, ಮಾಧ್ವಪೀಠ, ಮಾಧ್ವಜನಾಂಗ, ಇವುಗಳ ಮೇಲಿನ ತುಂಬಿ ತುಳುಕುವ ದ್ವೇಷಮೂಲಕ ತೆಗಳಬೇಕೆಂದು ಅಸಂಗತ ಮತ್ತು ಪರಸ್ಪರ ವಿರುದ್ಧ ಮಾತುಗಳನ್ನು ಬರೆದು ಪ್ರಕಟಿಸಿ ಪ್ರಚಾರ ಮಾಡುತ್ತಿದ್ದಾ ರೆಂದಿಷ್ಟೇ ಹೇಳಬಹುದು. ತಾವಾದರೂ ಮಾಧ್ವರನ್ನು ನಿಂದಿಸಲು ಉಪಯೋಗಿಸುವ ಮಾತುಗಳ ಅರ್ಥವನ್ನು ಯಥಾರ್ಥವಿರಬಹುದೆಂದು ತಿಳಿದಿರಬಹುದೇ? ಅದೂ ಶಕ್ಯವಿಲ್ಲ.

ಏಕೆಂದರೆ, ಅವರು ಹೇಳುತ್ತಿರುವ ಪ್ರಮೇಯಗಳು ತಮ್ಮ ಆಶಾ-ಆಕಾಂಕ್ಷೆಗಳನ್ನು ವ್ಯಕ್ತಪಡಿಸುವ ಊಹಾಪ್ರಪಂಚವೇ ವಿನಹ ಒಂದಕ್ಕಾದರೂ ಆಧಾರ ಕೊಟ್ಟು ರುಜುಪಡಿಸಲಿಲ್ಲ, ನಿರ್ಧರಿಸಲಿಲ್ಲ. ಉದಾಹರಣೆ—ಆನಂದಗಿರಿ ಶಂಕರವಿಜಯದ್ದೆಂದು ತೋರಿಸುವ "ರೂಪ್ಯಪೀಠಾಧಿಷ್ಠಲೇಷು ಕೃಷ್ಣಾದಿ ಪ್ರತಿಮಾಂ ಕೃತ್ವಾ" ಈ ವಾಕ್ಯವೊಂದಲ್ಲದೆ ಯಾವ ಇತರ ಆಧಾರಗಳೂ ತೋರಿಸಲಿಲ್ಲ. ತೋರಿಸಿದ ಆ ವಾಕ್ಯವಾದರೂ ಬಹಳ ಅಸ್ಪಷ್ಟವಿದೆ. ಅದರಲ್ಲಿ ಉಡುಪಿಯ ಪಂಚಕ್ರೋಶದಲ್ಲಿ ಇಂಥ ಕಡೆಯೆಂಬ ಸ್ಥಳ ನಿರ್ದೇಶವಿಲ್ಲ. ಇಂಥಾ ಆಕಾರದ ಶ್ರೀಕೃಷ್ಣ ಪ್ರತಿಮೆ ಎಂಬ ಸ್ಪಷ್ಟ ವಚನವಿಲ್ಲ. ಇಂಥಾ ಕಾಲದಲ್ಲಿ ಎಂಬ ಮಾತಿಲ್ಲ. ಮತ್ತೇನೆಂದರೆ ಉಡುಪಿಯಲ್ಲಿ ಎಲ್ಲೋ ಒಂದು ಕಡೆ ಯಾವದೇ ಆಕೃತಿಯ ಶ್ರೀಕೃಷ್ಣ ಪ್ರತಿಮೆಯೊಂದರ ಸ್ಥಾಪನೆ ಆಗಿದೆ. ಅದು ಹಸ್ತಾಮಲಕರಿಂದ, ಇಷ್ಟು ಮಾತ್ರ ತಿಳಿಯಬಹುದು.

1. ಆ ಪ್ರತಿಮೆ ಶ್ರೀವೇಣುಗೋಪಾಲಕೃಷ್ಣನದ್ದೇ ಎಂಬುದು ಮಾಧ್ವದ್ವೇಷದ ಮೂಲಕ ಕೇವಲ ಊಹೆ. ಅದೂ ಶ್ರೀಕೃಷ್ಣ ಮಠದಲ್ಲಿ ಒಂದು ವೇಣುಗೋಪಾಲ ಕೃಷ್ಣನ ಪ್ರತಿಮೆ ಇದೆ ಎಂದು ತಿಳಿದುಕೊಂಡುದುದರಿಂದ ಮಾತ್ರ.

2. ಸದರಿ ಪ್ರತಿಮೆಯನ್ನು ಹಸ್ತಾಮಲಕರು ಶ್ರೀಕೃಷ್ಣ ಮಠದಲ್ಲಿಯೇ ಮೊದಲು ಸ್ಥಾಪಿಸಿದ್ದರು. ಅದನ್ನು ಕಿತ್ತೆಸೆದು ಅದೇ ಸ್ಥಳದಲ್ಲಿ ತನ್ನ ಕಡಗೋಲು ಶ್ರೀಕೃಷ್ಣನನ್ನು ಸ್ಥಾಪಿಸಿದರು ಎಂಬುದು ಕೆಲವರ ಸಂಕಲ್ಪ. ಅದರಲ್ಲಿಯೂ ಶ್ರೀಮಧ್ವಾಚಾರ್ಯರು ಕಿತ್ತಿದ್ದರು ಎಂದು ಕೆಲವರ ಅಭಿಲಾಷೆಯಾದರೆ, ಇನ್ನು ಕೆಲವರದ್ದು ಸೋದೆ ಶ್ರೀವಾದಿರಾಜರೇ ಕಿತ್ತೆಸೆದರು ಎಂಬ ಅಭಿಲಾಷೆಯಾಗಿರುತ್ತದೆ.

3. ಸದರಿ ವೇಣುಗೋಪಾಲಕೃಷ್ಣನನ್ನು ಹೇರಳ ತಸದೀಕು ಮತ್ತು ಆಸ್ತಿ, ಉತ್ಪನ್ನ ಎತ್ತಿಹಾಕಲು, ಆದಿವುಡುಪಿಯಿಂದ ಉಡುಪಿಗೆ ತರಿಸಿ, ಅಡಗಿಸಿಟ್ಟರೆಂದು ಬೇರೆ ಕೆಲವರ ಅಪೇಕ್ಷೆ.

4. ಶ್ರೀಕೃಷ್ಣ ಮಠದ ಅಡಿಸ್ಥಳ ಅನಂತೇಶ್ವರ ದೇವಾಲಯದ್ದಿದ್ದು ಅದನ್ನು ಗೇಣಿಗೆ ಪಡೆದು, ಶ್ರೀಕೃಷ್ಣ ಮಠ ಕಟ್ಟಿಸಿದ್ದು. ಇದರಿಂದಾಗಿ ಶ್ರೀಕೃಷ್ಣನು ಗೇಣಿದಾರನಾಗಿ ಹೀನನಾದನು. ಅನಂತೇಶ್ವರನು ಧನಿ ಆಗಿ ಹೆಚ್ಚಿನವನಾಗುತ್ತಾನೆ ಅಂತ ತೃಪ್ತಿ ಕೆಲವರಿಗೆ. ಅದರಲ್ಲಿಯೂ ಶ್ರೀಕೃಷ್ಣ ಮಠ ಕಟ್ಟಿಸಿದವರು ಶ್ರೀಮಧ್ವಾಚಾರ್ಯರಾಗಬೇಕೆಂದು ಕೆಲವರ ಮನೋರಥ. ಬೇರೆ ಕೆಲವರಿಗೆ ವಾದಿರಾಜರೇ ಶ್ರೀಕೃಷ್ಣ ಮಠ ಕಟ್ಟಿಸಿ ಉಪದ್ವ್ಯಾಪಿತನ ಮಾಡಿದರೆಂದು ವಾದಿರಾಜರ ಮೇಲೆ ದೋಷಾರೋಪಣ ಮಾಡುವ ಉದ್ದೇಶವಿದೆ. ಅಂತೂ ಮಾಧ್ವರ ದ್ವೇಷ ಸಾಧಿಸಲು ಯಾರುಯಾರಿಗೆ ಏನೇನು ತೋರುತ್ತದೋ ಅದನ್ನೆಲ್ಲಾ ಕಲ್ಪಿಸಿ ಅದರದ್ದು ಎಲ್ಲಾ ಉಪಯೋಗ ಮಾಡಿಕೊಳ್ಳಲಾಗಿದೆ ಎಂದು ಹೇಳಲು ಅಡ್ಡಿ ಇಲ್ಲ. ಪ್ರಮಾಣ ಸಿದ್ಧವಾದ ಕಾರಣಗಳ ಮೇಲಿಂದ

ದೋಷಾರೋಪಣೆ ಮಾಡುವುದುಚಿತ. ದೋಷಾರೋಪಣೆ ಮಾಡಬೇಕೆಂದು ಕಾರಣಗಳನ್ನು ಕಲ್ಪಿಸುವುದು ವಿಚಿತ್ರ ರೀತಿ.

ಅಚ್ಯುತ ಶರ್ಮರು ಮಾಧ್ವರನ್ನು ದೂಷಿಸಲಿ, ನಿಂದಿಸಲಿ, ಬೈಯಲಿ, ನನಗೆ ಸಂತೋಷ. ಆದರೆ, ಸಕಾರಣ ಬೈದರೆ, ದೂಷಿಸಿದರೆ, ಸಮಾಧಾನವಾಗುತ್ತದೆ. ಅದಕ್ಕಾಗಿ ಶರ್ಮರು—

1. ವೇಣುಗೋಪಾಲಕೃಷ್ಣನನ್ನೆ ಹಸ್ತಾಮಲಕರು ಸ್ಥಾಪಿಸಿದ್ದರು.

2. ಶ್ರೀಕೃಷ್ಣ ಮಠ ಇದ್ದ ಸ್ಥಳದಲ್ಲಿಯೇ ಸ್ಥಾಪಿಸಿದ್ದರು.

3. ಶ್ರೀಮಧ್ವಾಚಾರ್ಯರೇ ಆಗಲಿ, ಶ್ರೀವಾದಿರಾಜರೇ ಆಗಲಿ, ಕಿತ್ತಿದ್ದರು, ಅಡಗಿಸಿದ್ದರು, ಇತ್ಯಾದಿ ಮಾಧ್ವರನ್ನು ದೂಷಿಸಲು ಉಪಯೋಗಿಸಿದ ಕಾರಣಗಳನ್ನು ರುಜುವಾತು ಪಡಿಸಬೇಕು. ಗಾಳಿ ಸುದ್ದಿಗಳನ್ನು ಬರೆಯಬಾರದು. ಕೆಲಸಕ್ಕೆ ಬಾರದ ಮಾತುಗಳನ್ನು ಆಡಬಾರದು ಎಂದು ಹೇಳಬೇಕಾಗುವುದು. ನೈಜ ಹಿನ್ನಲೆಯನ್ನು ವಿವೇಚಿಸಲು ಹೊರಟವರು ಬಾಲಕರಿಗೆ ಸರಿಹೋಗುವ ಇಂಥಾ ಅಸಂಗತ, ವಿರುದ್ಧ, ಅನಿಶ್ಚಿತ ಮಾತುಗಳನ್ನು ಉಪಯೋಗಿಸಿ ಜಗತ್ತಿನಲ್ಲಿ ಗಣ್ಯವಾದ ಒಂದು ಮಾಧ್ವ ಜನಾಂಗವನ್ನೂ ರಾಜಾಧಿರಾಜರಿಂದ ಮಾನ್ಯವಾದ ಮಾಧ್ವಪೀಠಗಳನ್ನೂ ಅಂಥಾ ಒಂದು ಮತಸ್ಥಾಪಕರಾದ ಶ್ರೀಮಧ್ವಾಚಾರ್ಯರನ್ನೂ ದೂಷಿಸಲೆಂದೇ ಗ್ರಂಥ ಬರೆಯಲು ಹೊರಟದ್ದು ಭಾರತದ ಶೋಚನೀಯ ಪರಿಸ್ಥಿತಿ ಎಂದು ಹೇಳಬೇಕಾಗುತ್ತದೆ. ಈ ಗ್ರಂಥವನ್ನು "ಉಡುಪಿಯ ನೈಜ ಹಿನ್ನಲೆ" ಎನ್ನುವುದಕ್ಕಿಂತ "ಶರ್ಮರ ನೈಜ ಹಿನ್ನಲೆ" ಎಂಬುದರಲ್ಲಿ ಹೆಚ್ಚಿನ ಔಚಿತ್ಯವಿದೆ.

ಶ್ರೀ ಮಧ್ವವಿಜಯದ ಸರ್ಗ 9, ಶ್ಲೋಕ 40ರಲ್ಲಿ "ಒಂದು ದಿವಸ ಉಡುಪಿಯಲ್ಲಿರುವಾಗ ಶ್ರೀಮಧ್ವಾಚಾರ್ಯರು ಕಲಿಯುಗದಲ್ಲಿ ಮುಕ್ತಿಯೋಗ್ಯರಿಗೆ ಸಚ್ಛಾಸ್ತ್ರ ಶ್ರವಣಾದಿಗಳಿಗೆ ವಿಘ್ನಕಾರಿಯಾದ ದುರಿತಗಳ ಪರಿಹಾರಕ್ಕಾಗಿ ಶ್ರೀಕೃಷ್ಣ ಪ್ರತಿಷ್ಠೆ ಮಾಡಬೇಕೆಂದು ಇಚ್ಛಿಸಿದರು" ಎಂದು ಬರೆದಿದೆ. ಮೊದಲೇ ತಮ್ಮ ಮಠದಲ್ಲಿ ಶ್ರೀವೇಣುಗೋಪಾಲಕೃಷ್ಣ ಪ್ರತಿಮೆ ಸ್ಥಾಪಿತವಾಗಿ ಇರುತ್ತಿದರೆ ಮತ್ತು ಆ ದೇವರು ಅನೇಕ ಶಿವಳ್ಳಿಯವರ ಕುಲದೇವರಾಗಿರುತ್ತಿದ್ದರೆ, ಭಜಕ ವರ್ಗದಿಂದ ಸೇವೆಗೊಳ್ಳುತ್ತಿದ್ದರೆ, ಆ ದೇವರನ್ನು ಬಿಟ್ಟು ಬೇರೆ ದೇವರನ್ನು ಸ್ಥಾಪಿಸುವ ವಿಚಾರ ಯಾಕೆ ಬೇಕಾಗಿತ್ತು? "ಅಲಾಭೆ ಕಾಮಃ" ಇಲ್ಲದಿದ್ದರೆ ಅಪೇಕ್ಷೆ. ಇದ್ದದ್ದರದ್ದು ಅಲ್ಲ. ಆದುದರಿಂದ ಉಡುಪಿಯಲ್ಲಿ ಆಚಾರ್ಯರ ಕಾಲಕ್ಕಿಂತ ಮೊದಲು ಯಾವ ಶ್ರೀಕೃಷ್ಣ ದೇವರೂ ಇರಲಿಲ್ಲ ಎಂದು ನಿಶ್ಚಯಿಸಬಹುದು.

ಒಂದು ವೇಳೆ ಶ್ರೀಮಧ್ವಾಚಾರ್ಯರಿಗೆ ಶ್ರೀಹಸ್ತಾಮಲಕರು ಸ್ಥಾಪಿಸಿದ ಶ್ರೀವೇಣುಗೋಪಾಲಕೃಷ್ಣನನ್ನು ಕಿತ್ತಿಸೆದು ತಮ್ಮ ಕೃಷ್ಣನನ್ನು ಸ್ಥಾಪಿಸಿ ತಮ್ಮ ಮಹತ್ವವನ್ನು ಪ್ರಸ್ಥಾಪಿಸುವ ಅಭಿಪ್ರಾಯವಿರುತ್ತಿದ್ದರೆ ಪ್ರಸ್ತಾಪನೆಯಿಂದ ಸುರುಮಾಡಿ

ಶರ್ಮರು ಅಲ್ಲಲ್ಲಿ ಬರೆಯುವಂತೆ ಗಾಳಿ ಸೋಕದ ಮಹಾದ್ವಾರವಿಲ್ಲದ ಒಂದು ಮೂಲೆಯಲ್ಲಿಯ ಇಕ್ಕಟ್ಟಾದ ಸ್ಥಳದ ಶ್ರೀವೇಣುಗೋಪಾಲಕೃಷ್ಣನ ಮೇಲೆ ದಾಳಿಮಾಡುವುದನ್ನು ಬಿಟ್ಟು, ಚಂದ್ರೇಶ್ವರನ ಮೇಲೆ ದಾಳಿಮಾಡಿ ಲಿಂಗವನ್ನು ಕಿತ್ತೆಸೆದು ತಮ್ಮ ಶ್ರೀಕೃಷ್ಣನನ್ನು ಸ್ಥಾಪಿಸಬಹುದಿತ್ತಲ್ಲವೇ? ಮತ್ತು ಮೆರೆಯಬಹುದಿತ್ತಲ್ಲವೇ? ಬಲಾತ್ಕಾರದಿಂದ ಆಕ್ರಮಣವನ್ನು ಮಾಡುವವರಿಗೆ ಚಂದ್ರಮೌಳೀಶ್ವರ ದೇವಸ್ಥಾನ ಬೇಡವೆಂದು ತಡೆದವರು ಯಾರು? ಎಲ್ಲಾ ಸುಳ್ಳು. ಶ್ರೀವೇಣುಗೋಪಾಲಕೃಷ್ಣನನ್ನು ಶಿಷ್ಯ ಹಸ್ತಾಮಲಕರು ಸ್ಥಾಪಿಸಿದ್ದರೆ ಪು. 10, 11ರಲ್ಲಿ ಶರ್ಮರು ಬರೆದ ಪ್ರಕಾರ ಚಂದ್ರ ಮೌಳೀಶ್ವರನನ್ನು ಗುರು ಶಂಕರಾಚಾರ್ಯರೇ ಸ್ಥಾಪಿಸಿದ್ದಾರೆ. ಅದನ್ನೇ ಕಿತ್ತೆಸೆದರೆ ಶ್ರೀಕೃಷ್ಣ ಮಠಕ್ಕೆ ವಿಸ್ತಾರವಾದ ಮಹಾದ್ವಾರವುಳ್ಳ ಮಧ್ಯ ಸ್ಥಳವೇ ಸಿಗಬಹುದಿತ್ತು.

ನಿಜವಾಗಿ ಶ್ರೀಮಧ್ವಾಚಾರ್ಯರು ಯಾವ ದೇವಸ್ಥಾನವನ್ನೂ ಕೆಡವಲಿಲ್ಲ, ಯಾವ ದೇವರನ್ನೂ ಕಿತ್ತೆಸೆಯಲಿಲ್ಲ. ತಮ್ಮ ವಿಚಾರ ಪ್ರಕಾರ ತಾವು ಯೋಚಿಸಿದಂತೆ ತಮ್ಮ ಸ್ವಂತ ಮಠದಲ್ಲಿ ತಾನು ಆರಿಸಿಕೊಂಡುಬಂದ ಕಡಗೋಲು ಕೃಷ್ಣನನ್ನು ಸ್ಥಾಪಿಸಿದ್ದಾರೆ. ಅದರ ಅಡಿಸ್ಥಳವು ಗೇಣಿಗೆ ಪಡದದ್ದು ಅಲ್ಲ. ಆ ಸಂಬಂಧದ ರಿಕಾರ್ಡುಗಳು ಶ್ರೀಕೃಷ್ಣ ಮಠದಲ್ಲಿ ಇರುವುದಿಲ್ಲ. ಶ್ರೀಅನಂತೇಶ್ವರ ದೇವಸ್ಥಾನದಲ್ಲಿಯೂ ಇರುವುದಿಲ್ಲ. ಗೇಣಿ ಕೊಡುವುದು, ಪಾವತಿ ಪಡೆಯುವುದು, ವಗೈರೆ ಯಾವ ಕ್ರಮವೂ ಇರುವುದಿಲ್ಲ.

(ಪು. 11ರಲ್ಲಿ) ಶರ್ಮರು ಗೇಣಿ ಸಂದಾಯದ ಬಗ್ಗೆ ಅನಂತೇಶ್ವರ ದೇವರ ಮಹೋತ್ಸವ ಕಾಲದಲ್ಲಿ ಶ್ರೀಕೃಷ್ಣನು ತನ್ನ ರಥವನ್ನು ಕೊಟ್ಟು ಗೇಣಿ ಪಾವತಿ ಮಾಡುವ ಕ್ರಮವಿಟ್ಟುಕೊಂಡದ್ದಾಗಿ ತಿಳಿದುಬರುತ್ತದೆ." ಎಂದು ಗಾಳಿಸುದ್ದಿಯೊಂದನ್ನು ಬರೆದುಬಿಟ್ಟಿದ್ದಾರೆ. ಹಾಗಾದರೆ ಚಂದ್ರಮೌಳೀಶ್ವರ ದೇವರ ಉತ್ಸವ ಕಾಲದಲ್ಲಿ ಶ್ರೀಕೃಷ್ಣನು ತನ್ನ ರಥವನ್ನೇ ಕೊಡುತ್ತಾನಲ್ಲಾ? ಅದು ಯಾವುದರ ಸಂದಾಯದ ಬಗ್ಗೆ ಎಂಬುದನ್ನು ತೋರಿಸಿ ಬರೆದು ತೋರಿಸಿಲ್ಲವೇಕೆ? ಸುಬ್ರಮ್ಹಣ್ಯದಲ್ಲಿ ಶ್ರೀಮಠದವರು ತಮ್ಮ ರಥವನ್ನು ಕಟ್ಟುವ ವರೆಗೆ ದೇವಸ್ಥಾನದವರು ನರಸಿಂಹ ದೇವರಿಗೆ ರಥೋತ್ಸವ ಕಾಲದಲ್ಲಿ ದೇವಸ್ಥಾನದ ರಥವನ್ನು ಕೊಡುತ್ತಿದ್ದ ಸಂಪ್ರದಾಯವಿತ್ತು. ಅದು ಸಹ ಆದಿ ಸುಬ್ರಮ್ಹಣ್ಯದಿಂದ ಶ್ರೀನರಸಿಂಹದೇವರ ಸ್ಥಳದಲ್ಲಿ ಬಂದು ಶ್ರೀಸುಬ್ರಮ್ಹಣ್ಯನು ದೇವಸ್ಥಾನ ಕಟ್ಟಿಕೊಂಡು ಇರುತ್ತಿದ್ದರ ಬಗ್ಗೆ ಗೇಣಿ ಪಾವತಿ ಮಾಡಲಿಕ್ಕೆ ಎಂದು ಶರ್ಮರು ಹೇಳತಕ್ಕವರಿದ್ದಾರೆಯೋ? ಏನು?

(ಪು. 38ರಲ್ಲಿ) O. S. No. 5/1961ನೇ ವ್ಯಾಜ್ಯದಲ್ಲಿ ಶರ್ಮರು ಬರೆದಿದ್ದರ ವಿರುದ್ಧ ಮಠದ ಹಕ್ಕು ಶಾಶ್ವತವಾದದ್ದು ಎಂತಲೂ, ಸಿದ್ಧಿ ವಿನಾಯಕನ ಗುಡಿ ಅಲ್ಲವೆಂತಲೂ, ದೇವಸ್ಥಾನಕ್ಕೆ ಸಂಪೂರ್ಣ ವಿರುದ್ಧವಾಗಿಯೇ ತೀರ್ಪು ಆಗಿದೆ. ಸಿದ್ಧಿ ವಿನಾಯಕನ ಅಸ್ತಿತ್ವವು ಸುಬ್ರಮ್ಹಣ್ಯ ಗುಡಿಯಲ್ಲಿ ಅಂತ ಈಗ ಅಲ್ಲ ಎಂದೇ ಗೊತ್ತಾಗಿತ್ತು. ಈಗ ಸಕಲ ಜನರಿಗೂ ಸುಬ್ರಮ್ಹಣ್ಯ ಗುಡಿಯೊಳಗೆ ಇದ್ದದ್ದೇ ಹೊರತು ಅಡಗಿಸಿ ಮಠದವರು ಸುಬ್ರಮ್ಹಣ್ಯದ ಗುಡಿಯಲ್ಲಿ ಇಟ್ಟದ್ದಲ್ಲವೆಂದು ಜಡ್ಜ್‌ಮೆಂಟಿನಿಂದ ಸ್ಪಷ್ಟ

ವಾಯಿತು. ಮತ್ತು ಮಾಧ್ವ ಯತಿಗಳ ಮೇಲೆ ದೇವಸ್ಥಾನದವರು ಮಾಡಿದ ಅನ್ಯಾಯವು ಬಹಿರಂಗವಾಯಿತು. ಶರ್ಮರು ತಿರುವು ಮುರುವು ಮಾಡಿ ದೇವಸ್ಥಾನದವರ ತಪ್ಪನ್ನು ಮುಚ್ಚಿಡಲು ಹವ್ಯಾಸಪಡುತ್ತಾರೆ. ದೇವಸ್ಥಾನದವರು ಅಪೀಲು ಮಾಡಿದ್ದಾರೆ. ಅದು ಪೆಂಡಿಂಗ್ ಇದೆ. ಮಾಧ್ವರ ವಿರುದ್ಧ ಶರ್ಮರ ಅಪಪ್ರಚಾರ ಸಾಕು.

ಮಧ್ವವಿಜಯ ಸರ್ಗ 5 ಶ್ಲೋಕ 9ರ ಪ್ರಕಾರ ಉಡುಪಿಯಲ್ಲಿ ಶ್ರೀಅಚ್ಯುತ ಪ್ರೇಕ್ಷಾಚಾರ್ಯ ಮತ್ತು ಶ್ರೀಮಧ್ವಾಚಾರ್ಯ ಇವರಿಗೆ ಪ್ರಪ್ರತ್ಯೇಕವಾಗಿ ಬೇರೆಬೇರೆ 2 ಮಠಗಳು ಇದ್ದುವು. ಅವುಗಳಲ್ಲಿ ಅವರಿಗೆ ಸ್ವಾತಂತ್ರ್ಯವೂ ಇರುತ್ತಿತ್ತು ಎಂದು ತಿಳಿಯುತ್ತದೆ. ಗಂಗಾನಾಥ ಜ್ಞಾ ಎಂಬವರು ಪ್ರಯಾಗ ಯುನಿವರ್ಸಿಟಿ ವೈಸ್‌ಚಾನ್ಸೆಲರ್ ಇದ್ದರು. ಅವರು ನ್ಯಾಯವಾರ್ತಿಕ ಕಾಶೀ ಎಡಿಶನ್ ಪುಸ್ತಕದಲ್ಲಿ ದೊಡ್ಡದೊಂದು ಭೂಮಿಕಾ ಬರೆದಿರುವರು. ಅದರಲ್ಲಿ ಅವರು ಪರೀಕ್ಷಿದ್ರಾಜನ ಮಗನಾದ ಮಹಾಭಾರತದ ಜನಮೇಜಯ ರಾಜನು ಒಂದು ಸೂರ್ಯಗ್ರಹಣ ಪರ್ವಕಾಲದಲ್ಲಿ ತುಂಗಭದ್ರಾ ತೀರದಲ್ಲಿರುವ ಭೀಮಸೇತು ಎಂಬ ಸ್ಥಳವನ್ನು ತಮ್ಮ ಪಿತೃಗಳ ಉದ್ಧಾರಾರ್ಥಕವಾಗಿ ಗರುಡವಾಹನತೀರ್ಥರೆಂಬವರಿಗೆ ದಾನಮಾಡಿ ಕೊಟ್ಟ ತಾಮ್ರ ಶಾಸನವನ್ನು ಪ್ರಕಟಿಸಿರುತ್ತಾರೆ. ಸದರಿ ಶಾಸನದ ತಿಥಿ ವಾರಗಳನ್ನು ಗಣಿತ ಮಾಡಲಾಗಿ ಸರಿಬರುವುದರಿಂದ ಸದರಿ ಶಾಸನದ ಸತ್ಯತೆಯು ಸಿದ್ಧವಾಗಿದೆ. ರಾಮೇಶ್ವರ ಯಾತ್ರೆ ಮುಗಿಸಿಕೊಂಡು ಹಿಂತಿರುಗುವಾಗ ಸದರಿ ದಾನ ಮಾಡಿಕೊಟ್ಟದ್ದಾಗಿರುತ್ತದೆ. ಸದರಿ ತಾಮ್ರಶಾಸನವೂ ಮತ್ತು ಸದರಿ ಆಸ್ತಿಯೂ ಇದೀಗ ಭೀಮನಕಟ್ಟೆ ಶ್ರೀಗಳವರ ಸಂಸ್ಥಾನವಲ್ಲಿರುತ್ತದೆ. ಮತ್ತು ಬಾರಕೂರು ರಾಜರು 10ನೇ ಶತಮಾನ ಅಚ್ಯುತ ಪ್ರೇಕ್ಷಾಚಾರ್ಯರ ಪೂರ್ವಜರನ್ನು ಗುರುಗಳನ್ನಾಗಿ ವರಿಸಿ ಭಂಡಾರಿಕೇರಿಯಲ್ಲಿ ಮಠ ಕಟ್ಟಿಸಿಕೊಟ್ಟು ಆಸ್ತಿಯನ್ನು ದಾನ ಮಾಡಿ ಕೊಡಿಸಿದ್ದರ ಸಂಬಂಧ ತಾಮ್ರಶಾಸನ ವಗೈರೆ ದಾಖಲೆಗಳು ಭಂಡಾರಿಕೇರಿ ಮಠದಲ್ಲಿರುತ್ತವೆ. ಇದರಿಂದ ಶ್ರೀಮದಚ್ಯುತ ಪ್ರೇಕ್ಷಾಚಾರ್ಯರ ಪ್ರಾಚೀನ ಗುರುಪರಂಪರೆಯು ಗರುಡವಾಹನ ತೀರ್ಥರಿಂದಲೂ ಸಂಪನ್ನ, ರಾಜಮಾನ್ಯ, ಜಗದ್ವಂದ್ಯ, ತೇಜಸ್ವೀ, ಗುರುಪರಂಪರೆಯಾಗಿತ್ತು ಎಂದು ತಿಳಿಯಬಹುದಾಗಿದೆ. ಕಾರಣ ತಮಗೆ ಉಳಿದುಕೊಳ್ಳಲು ಸ್ವತಂತ್ರವಾಗಿ ಸ್ಥಳವಿಲ್ಲದೆ ಪರರನ್ನು ಬೇಡುವ ಇತರರ ಸ್ಥಳವನ್ನು ಆಶ್ರಯಿಸುವ ಪರಿಸ್ಥಿತಿ ಉಂಟಾಗಿರಲಿಲ್ಲ.

ಮಧ್ವವಿಜಯದ 9-45 ಶ್ಲೋಕದಿಂದ ಸಹ ಶ್ರೀಮಧ್ವಾಚಾರ್ಯರ ಗುರು ಪರಂಪರೆಗೂ ಬಾರಕೂರು ರಾಜರಿಗೂ ಗುರುಶಿಷ್ಯ ಭಾವದ ನಿಕಟಸಂಬಂಧವಿದೆ ಎಂಬುದು ಕಾಣುತ್ತದೆ. ಆ ಶ್ಲೋಕದಲ್ಲಿ ಶ್ರೀಮಧ್ವಾಚಾರ್ಯರು ಒಂದು ಯಾಗ ಮಾಡಿಸುತ್ತಿರುವಾಗ ಮರಡಿತ್ತಾಯರೆಂಬವರು ಬಹುವಿಧ ಆತಂಕಗಳನ್ನು ಒಡ್ಡಿದರು. ಆಗ ಸಕಾಲದಲ್ಲಿ ಬಾರಕೂರು ರಾಜರು ಬಂದು ಆತನನ್ನು ಓಡಿಸಿ ಯಾಗವನ್ನು ನಿರ್ವಿಘ್ನ ಸಮಾಪ್ತಿಗೊಳಿಸಿದ ವಿಷಯ ಬರೆದಿದೆ. ಪು. 7ರಲ್ಲಿ "ಬಾರಕೂರು ರಾಜ್ಯವು ಪ್ರಬಲವಾಗಿದ್ದಾಗ ಆ ರಾಜ್ಯದ ಅವರ ಮನೆತನದ ಪ್ರಧಾನ ದೇವಸ್ಥಾನವು ಇದೇ

ಅನಂತೇಶ್ವರ ದೇವಸ್ಥಾನವೆಂದು" ಶರ್ಮರು ಬರೆಯುತ್ತಾರೆ. ಇದರಿಂದ ತಮ್ಮ ಗುರು
ಗಳಾದ ಅಚ್ಯುತಪ್ರೇಕ್ಷಾಚಾರ್ಯ ವ ಅವರ ಪೂರ್ವಜರಿಗೆ ಬಾರ್ಕೂರು ಅರಸರು
ಉಡುಪಿಯಲ್ಲಿ ಮಠವನ್ನು ಕಟ್ಟಿಸಿ ತಮ್ಮ ಕುಲದೇವತೆಯ ಆರಾಧನೆಗೆ ಅನುಕೂಲತೆ
ಯನ್ನು ಕಲ್ಪಿಸಿರಬಹುದು. ಈ ಊಹೆಯು ಮಧ್ವವಿಜಯ ಶ್ಲೋಕಕ್ಕೆ ಅನುಸರಿಸಿ
ಇರೋಣದರಿಂದ ಶುಷ್ಕತರ್ಕವಲ್ಲ. ಮಧ್ವವಿಜಯದ ಪೂರ್ವೋಕ್ತ ಶ್ಲೋಕದಲ್ಲಿ
"ಮಠಾಂತರ" ಪದದಿಂದ "ಅನ್ಯೋ ಮಠಃ ಮಠಾಂತರಂ" ಬೇರೆ ಮಠದಲ್ಲಿರುವ
ಮಧ್ವಾಚಾರ್ಯರನ್ನು ಕರೆಸಿದರು ಎಂದಿದೆ. ಇದರಿಂದ ಶ್ರೀಅಚ್ಯುತಪ್ರೇಕ್ಷಾಚಾರ್ಯರು
ತಾನು ಒಂದು ಮಠದಲ್ಲಿರುತ್ತಿದ್ದು ಅಲ್ಲಿ ವಾದಮಾಡಲು ಬಂದಿರುವ ಬುದ್ಧಿಸಾಗರನೆಂಬ
ಪಂಡಿತನೊಡನೆ ವಾದಮಾಡಲು ಬೇರೆ ಮಠದಲ್ಲಿರುವ ಶ್ರೀಮಧ್ವಾಚಾರ್ಯರನ್ನು ತನ್ನ
ಒಬ್ಬ ಶಿಷ್ಯನ ಮೂಲಕ ಕರೆಸಿದರೆಂದಮೇಲೆ ಆಗ ಅಚ್ಯುತಪ್ರೇಕ್ಷಾಚಾರ್ಯರಿಗೆ
ಬಾರಕೂರು ರಾಜರಿಂದ ಕಟ್ಟಿಸಿಕೊಡಲ್ಪಟ್ಟ ಒಂದು ಮಠ, ಶ್ರೀಮಧ್ವಾಚಾರ್ಯರು
ತಾವು ತಮ್ಮ ವರ್ಚಸ್ಸಿನಿಂದ ಸಂಪಾದಿಸಿದ ಮತ್ತೊಂದು ಮಠ ಹೀಗೆ ಎರಡು ಮಠಗಳು
ಇರುತ್ತಿದ್ದುವು ಎಂದು ಊಹಿಸಿದರೆ ತಪ್ಪಾಗದು. ಅದರ ಪೈಕಿ ಶ್ರೀಮಧ್ವಾಚಾರ್ಯರು
ತನ್ನ ಮಠದಲ್ಲಿಯೇ, ಅದು ಒಂದು ಮೂಲೆಯಲ್ಲಿರಲಿ, ಗಾಳಿ ಸೋಕದೆ ಇರಲಿ, ಇಕ್ಕ
ಟ್ಟಾಗಿರಲಿ, ತನ್ನದೆಂಬ ವೈಶಿಷ್ಟ್ಯವಿದ್ದುದರಿಂದ ಅಲ್ಲಿಯೇ ಸ್ಥಾಪಿಸಿದರು. ಅದು ಈಗ
ವೈಭವಶಾಲಿಯಾಗಿ ಮೆರೆಯುತ್ತಿದೆ. ಇದರಲ್ಲಿ ಹಸ್ತಾಮಲಕರ ಸಂಬಂಧವೂ ಇಲ್ಲ,
ಸ್ಥಾನಿಕರ ಹಸ್ತಕ್ಷೇಪವೂ ಇರುವುದಿಲ್ಲ. ಸೋದೆ ಶ್ರೀವಾದಿರಾಜರನ್ನಾಗಲೀ ಶ್ರೀಮಧ್ವಾ
ಚಾರ್ಯರನ್ನಾಗಲೀ, ಶರ್ಮರು ತನ್ನ ನೈಜ ಹಿನ್ನಲೆಯಿಂದ ತಿಳಿಯುವುದಕ್ಕಿಂತ ಅದನ್ನು
ಬಿಟ್ಟು ಆ ಮಹಾತ್ಮರ ವ್ಯಕ್ತಿಮಹತ್ವದ ಹಿನ್ನಲೆಯಿಂದ ಅವರನ್ನೂ, ಅವರ ವೈಭವ
ವನ್ನೂ, ಅರಿತುಕೊಳ್ಳಲು ಪ್ರಯತ್ನಪಡಲಿ. ಆಗ ಎಲ್ಲವೂ ಸುಸಂಬದ್ಧವಾಗಿ ಮನವರಿಕೆ
ಯಾಗುತ್ತದೆ. ಶ್ರೀಮಧ್ವಾಚಾರ್ಯರು ಸುಬ್ರಹ್ಮಣ್ಯದಲ್ಲಿ ವಾದಮಾಡಿ ವಿಜಯಶಾಲಿ
ಗಳಾಗಿ ಭಟ್ಟಾರಕ ಸಂಸ್ಥಾನವನ್ನು ಗೆದ್ದರು. ಶ್ರೀವಾದಿರಾಜರು ಸೋದೆಯ ಲಿಂಗಾಯ
ತರ ಸಂಸ್ಥಾನವನ್ನು ವಾದದಲ್ಲಿ ಗೆದ್ದು ಸೋದೆ ಶ್ರೀವಾದಿರಾಜರು ಎಂದು ಪ್ರಸಿದ್ಧ
ರಾದರು. ಶ್ರೀಮಧ್ವಾಚಾರ್ಯರು ಕುಂಬಳೆಯ ಜಯಸಿಂಹರಾಜ, ಮಹಾರಾಷ್ಟ್ರದ
ಈಶ್ವರ ದೇವರಾಜ, ಗುಲಾಮ ವಂಶದ ದಿಲ್ಲಿಯ ಅಲ್ಲಾವುದ್ದೀನ, ಗೋವೆಯ ರಾಜ,
ಮೊದಲಾದ ಅನೇಕ ರಾಜರಿಂದ ಬಹುಮಾನಿತರಾಗಿದ್ದಾರೆ.

ಸೋದೆ ಶ್ರೀವಾದಿರಾಜರು ಕರ್ಣಾಟಕ ಸಾಮ್ರಾಜ್ಯಾಧೀಶ್ವರರಾದ ವಿಜಯ
ನಗರದ ಚಕ್ರವರ್ತಿಗಳಿಂದ ಪೂಜಿತರಾಗಿದ್ದಾರೆ ಎಂದು ಪು. 52ರಲ್ಲಿ ಶರ್ಮರು ಬರ
ಕೊಂಡಿದ್ದಾರೆ. ಸೋದೆ ರಾಜನು ಶ್ರೀವಾದಿರಾಜರಿಗೆ ಶರಣಾಗತನಾಗಿದ್ದನೆ. ಹೀಗೆ
ಪ್ರಾಮಾಣಿಕವಾದ ಚರಿತ್ರೆಗಳು ಬರೆದು ಇಟ್ಟದ್ದು ಇವೆ. ಸೂರ್ಯನ ಕುರಿತು ಉಗುಳಿ
ದರೆ ತನ್ನ ಮೋರೆಗೆ ಬೀಳುತ್ತದೆ ಎಂಬಂತೆ ಮಹಾತ್ಮರ ತೆಗಳುವಿಕೆಯಿಂದ ತಮ್ಮ ಆತ್ಮ
ಗೌರವಕ್ಕೆ ಕುಂದು ಎಂದು ತಿಳಿದುಕೊಳ್ಳುವುದರಲ್ಲಿ ಮಹತ್ವವಿದೆ.

ಇನ್ನು ಶರ್ಮರಿಂದ ಉದಾಹರಿಸಲ್ಪಡುವ, ಆನಂದಗಿರಿಕೃತ ಶಂಕರವಿಜಯದ, ವಾಕ್ಯದ ಕುರಿತು 2 ಮಾತು ಹೇಳಬೇಕಾಗಿದೆ. ಶರ್ಮರು ನೈಜ ಹಿನ್ನೆಲೆಯನ್ನು ಪ್ರತಿ ಒಂದು ವಿಷಯದಲ್ಲಿ ವಿಮರ್ಶಿಸುವವರು. ಆದರೆ ಈ ಶಂಕರವಿಜಯದ ಮತ್ತು ಉದಾಹರಿಸಿದ ಆ ವಾಕ್ಯಗಳ ನೈಜ ಹಿನ್ನೆಲೆಯನ್ನು ವಿಚಾರದಲ್ಲಿ ತೆಗೆದುಕೊಳ್ಳಲಿಲ್ಲ ಏಕೋ? ಉದಾಹೃತ ಶಂಕರವಿಜಯದ ಈ ವಾಕ್ಯಗಳಲ್ಲಿ ಹಸ್ತಾಮಲಕರೆಂದರೆ ಶಂಕರಾಚಾರ್ಯರ ಶಿಷ್ಯರಾದ ಹಸ್ತಾಮಲಕಾಚಾರ್ಯರೇ ಆಗಿರಬಹುದೇ? ಎಂಬುದನ್ನು ಶರ್ಮರು ವಿಮರ್ಶಿಸಲಿಲ್ಲ. ಪು. 76ರಲ್ಲಿ ಬರೆದ ಸ್ಮಾರ್ತತತ್ತ್ವಕ್ಕನುಗುಣವಾದ ವೈಷ್ಣವ ಧರ್ಮದಲ್ಲಿ ಪಂಚಮುದ್ರಾಧಾರಣ ಸಂಪ್ರದಾಯಕ್ಕೆ ಅವಕಾಶ ಉಂಟೇ? ಶ್ರೀಹಸ್ತಾಮಲಕರ ಮೂಲಮಠವಾದ ದ್ವಾರಕಾಪೀಠದಲ್ಲಿಯೇ ಆಗಲಿ, ಪಂಚಮುದ್ರಾಧಾರಣೆ ಕ್ರಮವು ನಡೆಯುತ್ತದೆಯೋ? ಭಾಗವತ ಸಂಪ್ರದಾಯದ ಸ್ಮಾರ್ತ ಬ್ರಾಹ್ಮಣರನೇಕರಿರುವರು. ಅವರಲ್ಲಿ ಮುದ್ರಾಧಾರಣ ಮಾಡುವ ಪದ್ಧತಿ ಇರುವುದಿಲ್ಲ. ಪಂಚಮುದ್ರಾಧಾರಣವು ಶ್ರೀಮಧ್ವಮತದ ವೈಶಿಷ್ಟ್ಯವು ಎಂದು ತಿಳಿಯುತ್ತದೆ. ಪು. 85, 86, 87ಗಳಲ್ಲಿ "ತಪ್ತಮುದ್ರಾ ನಿಷೇಧ ಗ್ರಂಥಗಳು" ಎಂಬ ಶಿರೋಲೇಖನದ ಕೆಳಗೆ ಕೆಲವು ತಾಮಸ ಪುರಾಣವಾಕ್ಯಗಳನ್ನು ಉದಾಹರಿಸಿ, ಶರ್ಮರು ಪಂಚಮುದ್ರಾಧಾರಣೆ ಮತ್ತು ದ್ವಿಮುದ್ರಾಧಾರಣೆಗಳು ನಿಷಿದ್ಧವೆಂದು ಸಾರಿದ್ದಾರೆ. ಮತ್ತು ಮುದ್ರಾಧಾರಣೆ ಮಾಡುವುದರಿಂದ ಮಾಧ್ವರನ್ನು ನಿಂದಿಸಿದ್ದಾರೆ. ಹೀಗಿರುವಾಗ ಶಾಸ್ತ್ರನಿಷಿದ್ಧವೆಂದು ಶರ್ಮರು ಸಾರುವ ಮುದ್ರಾಧಾರಣೆಯನ್ನು ಮಾಡುತ್ತಿರುವಂಥಾ ಆನಂದಗಿರಿಯವರ ಹಸ್ತಾಮಲಕರು ಆದ್ಯಶಂಕರ ಭಗವತ್ಪಾದರ ಮುಖ್ಯಶಿಷ್ಯರಲ್ಲಿ ಒಬ್ಬರಾಗಿರಬಹುದೇ? ಎಂಬ ಸಂಶಯಕ್ಕೆ ಎಡೆಯುಂಟು.

ಮತ್ತು ಮುಂದಿನ ಅಧ್ಯಾಯದಲ್ಲಿ "ಲಕ್ಷ್ಮಣಸ್ತು" ಎಂದು ಉಪಕ್ರಮಿಸಿ ಪೂರ್ವ ಸಮುದ್ರತೀರದಲ್ಲಿ ದ್ವಿಮುದ್ರಾಧಾರಣೆ ಮಾಡಿ, ವೈಷ್ಣವಮತ ಪ್ರಚಾರ ಮಾಡುತ್ತಿರುವ ಶ್ರೀಶಂಕರಾಚಾರ್ಯರ ಶಿಷ್ಯರೊಬ್ಬರ ಉಲ್ಲೇಖ ಆನಂದಗಿರಿಕೃತ ಶಂಕರವಿಜಯದಲ್ಲಿದೆ. ಸದರಿ ಲಕ್ಷ್ಮಣನೆಂದರೆ ದ್ವಿಮುದ್ರಾಧಾರಣೆ ಮಾಡುತ್ತಾ ಶ್ರೀವೈಷ್ಣವ ಮತ ಪ್ರಚಾರ ಮಾಡಿದ ಶ್ರೀರಾಮಾನುಜಾಚಾರ್ಯರಲ್ಲದೆ ಮತ್ತೆ ಬೇರೆ ಯಾರೂ ಅಲ್ಲವೆಂಬುದು ಸ್ಪಷ್ಟವಿದೆ. ಶಂಕರಮತದಲ್ಲಿ ಅಂಥಾ ಶಿಷ್ಯರೊಬ್ಬರು ಬೇರೆ ಇದ್ದದ್ದು ಕಂಡುಬರುವುದಿಲ್ಲ. ಅದರಂತೆನೇ ಉಡುಪಿಯಲ್ಲಿ ಕೃಷ್ಣಪ್ರತಿಷ್ಠಾ ಮಾಡಿ ಪಂಚಮುದ್ರಾಧಾರಣ ಪೂರ್ವಕ ವೈಷ್ಣವಮತ ಪ್ರಚಾರ ಮಾಡಿದ ಶ್ರೀಮಧ್ವಾಚಾರ್ಯರನ್ನೇ ಕುರಿತು ಹಸ್ತಾಮಲಕರೆಂಬುದಾಗಿ ಬರೆದದ್ದೆಂದು ಊಹಿಸುವಂತಿದೆ. ಶ್ರೀಆನಂದಗಿರಿಯವರು ಸ್ವತಂತ್ರವಾಗಿ ವೈಷ್ಣವ ಮತವನ್ನು ಸ್ಥಾಪಿಸಿದ ಶ್ರೀರಾಮಾನುಜಾಚಾರ್ಯ ಮತ್ತು ಶ್ರೀಮಧ್ವಾಚಾರ್ಯ ಇವರಿಬ್ಬರನ್ನೂ ಶ್ರೀಶಂಕರಾಚಾರ್ಯ ಪರಂಪರೆಯವರೆಂದು ಭಾಸಪಡಿಸುವ ಅಭಿಪ್ರಾಯವಿಟ್ಟುಕೊಂಡಿರಬಹುದೆಂದು ತೋರುತ್ತದೆ. ಮುದ್ರಾಧಾರಣೆ ನಿಷಿದ್ಧವೆಂಬ ಶರ್ಮರ ಧೋರಣೆಯಂತೆ ಈ ನೈಜ ಹಿನ್ನೆಲೆಯನ್ನು ವಿವೇಚಿಸಲಾಗಿದೆ.

ವಸ್ತುತಃ ಹಸ್ತಾಮಲಕರೆಂದರೆ ಸಾಕ್ಷಾತ್ ಶಂಕರ ಭಗವತ್ಪಾದರ ಶಿಷ್ಯರಾಗಿದ್ದರೆ ನಮಗೆ ಅಸಮಾಧಾನವಿರುವುದಿಲ್ಲ. ಅವರೂ ಸಹ ಮುದ್ರಾಧಾರಣ ಮಾಡುತ್ತಾ ಇರುತ್ತಿದ್ದರೆಂದರೆ ಮುದ್ರಾಧಾರಣೆಯು ಶಾಸ್ತ್ರನಿಷಿದ್ಧವಲ್ಲವೆಂತಲೂ, ಪಂಚರಾತ್ರೋದಾಹೃತ ಅನೇಕ ಶ್ರುತಿಗಳಿಂದ ಮತ್ತು ಸಾತ್ವಿಕ ಪುರಾಣ, ಸ್ಮೃತಿಗಳಿಂದ ವಿಹಿತವೆಂತಲೂ, ತಾಮಸ ಪುರಾಣಗಳ ನಿಷೇಧಗಳಿಂದಾಗಿ ಸಾತ್ವಿಕಗ್ರಂಥಗಳ ವಿಧಿಗಳಿಗೆ ಹಾನಿ ತಟ್ಟುವುದಿಲ್ಲವೆಂತಲೂ, ಅನಾದಿಕಾಲದಿಂದಲೂ ಬಂದ ವೈಷ್ಣವ ಬ್ರಾಹ್ಮಣರ ಸಂಪ್ರದಾಯವೆಂತಲೂ, ಶೈವರು ವೈಷ್ಣವದ್ವೇಷದಿಂದ ಮುದ್ರಾಧಾರಣೆಯನ್ನು ನಿಂದಿಸುವರಲ್ಲದೆ ಅದರಲ್ಲಿ ಯಾವ ಅರ್ಥವೂ ಇರುವುದಿಲ್ಲವೆಂತಲೂ, ಸಿದ್ಧವಾಗುತ್ತದೆ. ಮತ್ತು ಶರ್ಮರ ಮುದ್ರಾಧಾರಣೆ ನಿಷೇಧವು ತನ್ನತಾನೇ ನಿಂತುಹೋಗುತ್ತದೆ.

ಪು. 39ರಲ್ಲಿ ಮಧ್ವವಿಜಯದ ಅಂತಿಮ ಶ್ಲೋಕಗಳಲ್ಲಿ ಶ್ರೀಮಧ್ವಾಚಾರ್ಯರು ತಮ್ಮ ಶಿಷ್ಯರಿಗೆ ಐತರೇಯೋಪನಿಷದ್ಭಾಷ್ಯ ಪಾಠ ಹೇಳುತ್ತಿರುವಾಗ ಸಶರೀರ ಅದೃಶ್ಯರಾದರು ಎಂದು ಬರೆದಿರುವುದರಿಂದ ಮಧ್ವಾಚಾರ್ಯರ ಕಾಲದಲ್ಲಿ ಶ್ರೀಕೃಷ್ಣ ಮಠ ಇರಲಿಲ್ಲವೆಂದು ಬರೆದಿದೆ. ಮೊದಲೇ ಶ್ರೀಮಧ್ವಾಚಾರ್ಯರು ಶ್ರೀಕೃಷ್ಣ ಮಠ ಕಟ್ಟಿಸಿ ಪ್ರತಿಷ್ಠಿಸಿದ್ದರೆ ತನ್ನ ಮಠವನ್ನು ಬಿಟ್ಟು ಪಾಠ ಹೇಳಲು ಶ್ರೀಮದನಂತೇಶ್ವರ ದೇವಸ್ಥಾನಕ್ಕೆ ಏಕೆ ಬರಬೇಕು? ನಂತರವಾದರೆ ಪಾಠ ಹೇಳುವಾಗಲೇ ಅದೃಶ್ಯರಾಗಿ ಕೊನೆಯಾದ್ದರಿಂದ ತದನಂತರ ಮಠ ಕಟ್ಟಲು ಹೇಗೆ ಶಕ್ಯವಾದೀತು? ಅಂತೂ ಮಧ್ವಾಚಾರ್ಯರ ಕಾಲದಲ್ಲಿ ಶ್ರೀಕೃಷ್ಣಮಠ ಇರಲಿಲ್ಲ ವ ಇರಬಾರದು, ಹೀಗೆ ಶರ್ಮರ ಅಭಿಪ್ರಾಯವಾಗಿದೆ. ಇದು ಸತ್ಯವಾಗಲು ಸಾಧ್ಯವಿಲ್ಲ. ಏಕೆಂದರೆ ಮೊದಲನೇಯದಾಗಿ ಶ್ರೀಮಧ್ವವಿಜಯದಲ್ಲಿ ಶ್ರೀಮಧ್ವಾಚಾರ್ಯರು ಪಾಠ ಹೇಳುವಾಗ ಶರೀರ ಸಮೇತ ಅದೃಶ್ಯರಾದರೆಂದು ಹೇಳಲ್ಪಟ್ಟಿದೆ ಎಂಬ ಮಾತೇ ಸುಳ್ಳು ಇದೆ. ಮಧ್ವವಿಜಯದಲ್ಲಿ ಪಾಠಹೇಳುವಾಗ ದೇವತೆಗಳು ಸ್ತೋತ್ರ ಮಾಡಿದರು, ಜಯ ಜಯಕಾರ ಮಾಡಿದರು, ಪುಷ್ಪವೃಷ್ಟಿ ಗೈದರು. ಆ ಪುಷ್ಪವೃಷ್ಟಿಯು ಸಕಲ ಜನರಿಗೂ ಕಾಣಿಸಿಕೊಂಡಿತ್ತು ಹೀಗೆಲ್ಲಾ ಹೇಳಿಯದೆ ವಿನಹ ಅದೃಶ್ಯರಾದ ಮಾತೇ ಇರುವುದಿಲ್ಲ. ಆದುವರಿಂದ ಅನಂತೇಶ್ವರ ದೇವಸ್ಥಾನದಲ್ಲಿ ಪಾಠ ಹೇಳುವಾಗ ಅದೃಶ್ಯರಾದರೆಂದು ಅಸತ್ಯ ವಿಧಾನ ಮಾಡಲಾಗಿದೆ. ಈ ಅಸತ್ಯ ವಿಧಾನದಿಂದ ಮ. ವಿ. 9-43ನೇ ಶ್ಲೋಕದಲ್ಲಿ ಹೇಳಿದ ಶ್ರೀಕೃಷ್ಣ ಪ್ರತಿಷ್ಠೆಯನ್ನು ನಿರಾಕರಿಸಿ ಸತ್ಯಾಪಲಾಪವನ್ನು ಸಹ ಮಾಡಲಾಗಿದೆ. ಈ ಮೊದಲೇ ಹೇಳಿದಂತೆ ಶಾಲಿವಾಹನ ಶಕ 1160ನೇ ಹೇವಲಂಬೀ ಸಂವತ್ಸರದ ಮಾಘ ಶುದ್ಧ ತೃತೀಯಾ ಶ್ರೀಕೃಷ್ಣ ಪ್ರತಿಷ್ಠೆಯೆಂದು ನಿಶ್ಚಿತವಾದರೂ ಅದರ ಮುಂದೆ ಅನಂತೇಶ್ವರ ದೇವಸ್ಥಾನದಲ್ಲಿ ಶ್ರೀಮದಾಚಾರ್ಯರು ಪಾಠ ಹೇಳಲು ಯಾವ ವಿರೋಧವೂ ಕಾಣುವುದಿಲ್ಲ. ಶ್ರೀಮದನಂತೇಶ್ವರನು ಸಕಲ ಶಿವಳ್ಳಿಯವರಿಗೂ ಕುಲ ದೇವನು. ತಂದೆ ತಾಯಿಗಳಾದ ನಾರಾಯಣ ಭಟ್ಟರೂ, ವೇದವತೀ ದೇವಿಯರೂ, 12 ವರ್ಷಕಾಲ ತಪಸ್ಸು ಮಾಡಿದ್ದರಿಂದ ಶ್ರೀಮದನಂತೇಶನ ಅನುಗ್ರಹವಾಗಿ

ಶ್ರೀಮಧ್ವಾಚಾರ್ಯರ ಅವತಾರವಾಯಿತು. ಗುರುಗಳಾದ ಅಚ್ಯುತಪ್ರೇಕ್ಷರು ಬಹು ವರ್ಷ ತಪಸ್ಸು ಮಾಡಿ ಮುಂದೆ ಶಿಷ್ಯನಾಗುವ ಶ್ರೀಮಧ್ವಾಚಾರ್ಯರ ಮೂಲಕ ದಿವ್ಯ ಜ್ಞಾನಪ್ರಾಪ್ತಿ ಎಂಬ ವರವನ್ನು ಶ್ರೀಮದನಂತೇಶ್ವರನಿಂದ ಪಡೆದರು. ಅಂಥಾ ಶ್ರೀಮದ ನಂತೇಶ್ವರನ ಸನ್ನಿಧಾನದಲ್ಲಿ ತಾನು ರಚಿಸಿದ ಮತ್ತು ಪಾಠ ಹೇಳಿದ ಐತರೇಯ ಭಾಷ್ಯಪಾಠದ ಮಂಗಳವನ್ನು ಮಾಡುವುದರಲ್ಲಿ ಔಚಿತ್ಯವನ್ನರಿತೇ ತನ್ನ ಮಠವಿದ್ದರೂ, ಶ್ರೀಮದನಂತೇಶ್ವರನ ಸಮೀಪಕ್ಕೆ ಹೋಗಿ ಪಾಠ ಹೇಳಿ ಮಂಗಳ ಮಾಡಿರುವರು. ದೇವತೆಗಳೂ ಅದರ ಮಹತ್ವವನ್ನರಿತು ಪುಷ್ಪವೃಷ್ಟಿಗೈದರು. ಅಜರಾಜನ ಪತ್ನಿ ಇಂದು ಮತಿಯು ದೇವತಾಪುಷ್ಪ ಪತನದಿಂದ ಒಮ್ಮಿಂದೊಮ್ಮೆ ಮೃತಳಾಗಿ ಬಿದ್ದಂತೆ ಶ್ರೀಮಧ್ವಾಚಾರ್ಯರು ಪುಷ್ಪವೃಷ್ಟಿಯಾದೊಡನೆಯೇ ಕೊನೆಗಾಣಲಿಲ್ಲ. ಮತ್ತೇ ನೆಂದರೆ ಶ್ರೀರಾಮಚಂದ್ರನು ದೇವತೆಗಳಿಂದ ಆಮಂತ್ರಿತನಾದ ಮೇಲೆ ಕೆಲವೊಂದು ದಿವಸ ಭೂಮಿಯಲ್ಲಿದ್ದು ಮುಂದಿನ ವ್ಯವಸ್ಥೆ ಮಾಡಿ ಯೋಗ್ಯರನ್ನು ಕರಕೊಂಡು ಮಹಾಪ್ರಸ್ಥಾನ ಹೊರಟು ಹೋದಂತೆನೇ, ಶ್ರೀಮಧ್ವಾಚಾರ್ಯರೂ ಸಹ ಕೆಲ ವೊಂದು ಮುಂದಿನ ವ್ಯವಸ್ಥೆಯನ್ನು ಮಾಡಿ ಕೆಲ ಶಿಷ್ಯರನ್ನು ಕರಕೊಂಡು ಬದರಿಕಾ ಶ್ರಮದಕಡೆ ಹೊರಟುಹೋದರು. ಶ್ರೀಮಧ್ವಾಚಾರ್ಯರು ತಮ್ಮ ಅವತಾರದ ಪ್ರಯೋ ಜನ ಮುಗಿಸಿದ ಮೇಲೆ ಪುಷ್ಪವೃಷ್ಟಿಯಾಯಿತೆಂಬುದು ನಿಜ. ಪುಷ್ಪವೃಷ್ಟಿಯಾದೊಡನೆ ಶರೀರ ಸಮೇತ ಅದೃಶ್ಯರಾದುದೆಂಬುದು ಸುಳ್ಳು. "ಸಂಪಾದಿತಸ್ವಕಾರ್ಯೇಽಸ್ಮಿನ್ ಸರ್ವಜ್ಞೇ ಸರ್ವದೇವತಾಃ | ವವೃಷುಃ ಪುಷ್ಪವಾರಂತಂ ಸ್ವೇಚ್ಛಾಸ್ತುತಿಪರಾಃ ಮುದಾ" ಎಂಬ ಶ್ಲೋಕ ಪ್ರಕಾರ ಆಚಾರ್ಯರ ಮೇಲೆ ಕೊನೆಭಾಗದಲ್ಲಿ ಪುಷ್ಪವೃಷ್ಟಿಯಾಯಿತು. "ಏಕೋನಾಶೀತಿ ವರ್ಷಾಣಿ ನೀತ್ವಾ ಮಾನುಷ ದೃಷ್ಟಿಗಃ | ಪಿಂಗಳಾಬ್ದೇ ಮಾಘ ಶುದ್ಧ ನವಮ್ಯಾಂ ಬದರೀಂ ಯಯೌ" ಎಂಬ ಶ್ಲೋಕದಲ್ಲಿ ಹೇಳಿದಂತೆ 79 ವರ್ಷ ಜನರ ಮಧ್ಯೆ ತಿರುಗುತ್ತಿದ್ದು ಶಾ. ಶ. 1200ರಲ್ಲಿ ಮಾಘ ಶುದ್ಧ ನವಮಿ ದಿನ ಬದರಿಗೆ ಕೆಲ ಶಿಷ್ಯ ರನ್ನು ಕರಕೊಂಡು ಸಂಚಾರ ಕ್ರಮದಿಂದ ಹೊರಟು ಹೋದರು. ಶ್ರೀಹೃಷೀಕೇಶ ತೀರ್ಥರ ಸಂಪ್ರದಾಯ ಪದ್ಧತಿಯಲ್ಲಿ ಹೇಳಿದ—

ತೇಷಾಂ ಮಂತ್ರೋಪದೇಶ ವ್ರತ ನಿಯಮ ಸುರಾರ್ಚಾದಿಕೆ ಸಂಪ್ರದಾಯಂ |
ಯುಗ್ಮೆ ಯುಗ್ಮೆ ಪ್ರಭಿನ್ನಂ ಕುರುತ ಇತಿ ಹೃಷೀಕೇಶತೀರ್ಥಾದಿಕೇಷು ||
ಆಜ್ಞಾಪ್ಯಾರಾದಟಂತಂ ವ್ರತನಿಯಮವಿಧೌ ಪದ್ಮನಾಭಂ ಯತೀಂದ್ರಂ |
ದೃಷ್ಟ್ವಾಽಚಾಜ್ಞಾಪ್ಯ ಭಿನ್ನಂ ವಿಧಿಮಮಿತಮತಿಃ ಕ್ಷೇತ್ರತೊ ನಿರ್ಗತೋಽಭೂತ್ ||

ಶ್ಲೋಕದಿಂದ ತನ್ನ ಸನ್ಯಾಸಿ ಶಿಷ್ಯರಿಗೆ ಆಚಾರ ಸಂಪ್ರದಾಯಗಳನ್ನೂ ಮುಂದೆ ನಡೆದು ಕೊಳ್ಳಬೇಕಾದ ರೀತಿಯನ್ನೂ ತಿಳಿಸಿ ದೂರದಲ್ಲಿ ಸಂಚಾರ ಮಾಡುತ್ತಿದ್ದ ಶ್ರೀಪದ್ಮನಾಭ ತೀರ್ಥರಿಗೂ ಆಚಾರ ಸಂಪ್ರದಾಯಗಳನ್ನು ತಿಳಿಸಿ ಹೇಳುತ್ತಾ ಉಡುಪಿ ಕ್ಷೇತ್ರದಿಂದ ಬದರೀಕ್ಷೇತ್ರಕ್ಕೆ ಹೊರಟು ಹೋದರು. ಸಂಚಾರ ಕ್ರಮದಿಂದ ಹೋದದ್ದೇ ವಿನಹ

ಅದೃಶ್ಯರಾಗಿ ಹೋದದ್ದಲ್ಲ, ತಿಳಿಯಬೇಕು. ಉಡುಪಿ ಅಷ್ಟಮಠಗಳ ಮೊದಲನೆ ಅಷ್ಟ ಶ್ರೀಗಳವರ ಪೈಕಿ ಕೆಲವರ ವೃಂದಾವನಗಳು ಕಾಣಸಿಗುವುದಿಲ್ಲ. ಅವರೆಲ್ಲಾ ಶ್ರೀಮಧ್ವಾ ಚಾರ್ಯರ ಒಟ್ಟಿಗೆ ಹೋಗಿರುತ್ತಾರೆಂಬ ಐತಿಹ್ಯ. ಮತ್ತು ಶ್ರೀಮದನಂತೇಶ್ವರ ದೇವ ಸ್ಥಾನದೊಳಗೆ ಶ್ರೀಮಧ್ವಾಚಾರ್ಯರ ಸ್ಥಳವೆಂದು ಯಾತ್ರಿಕರಿಗೆ ತೋರಿಸುವ ಸ್ಥಳವು ಅಲ್ಲಿಯೇ ಅದೃಶ್ಯರಾದರೆಂದಲ್ಲ. ಅಲ್ಲಿ ಬಹುಕಾಲ ತಪಸ್ಸು ಮಾಡುತ್ತಾ ಇದ್ದರು. ಪಾಠ ಹೇಳುತ್ತಾ ಇದ್ದರು. ಅಲ್ಲಿಯೇ ಪವಾಡವ ಪುಷ್ಪವೃಷ್ಟಿಯಾಯಿತು. ಮತ್ತು ಕೊನೆಗೆ ಹೊರಟು ಹೋಗುವಾಗ ಶ್ರೀಮದನಂತೇಶ್ವರನ ನಿರೋಪಪಡೆದುಕೊಂಡು ಆ ಸ್ಥಳದಲ್ಲಿದ್ದು ತನ್ನ ಅಗಲಿಕೆಯಿಂದ ಅಧೀರರಾದ ಶಿಷ್ಯರಿಗೆ ತಾನು ಅದೃಶ್ಯನಾಗಿ ಇಲ್ಲಿ ಸನ್ನಿಹಿತನಾಗಿರುತ್ತೇನೆ. ಇಲ್ಲಿ ಬಂದು ನೀವು ಭಜಿಸಿದರೆ ನಿಮ್ಮ ಕಷ್ಟಗಳು ನೀಗುವುವು. ಅಭೀಷ್ಟಗಳು ನೆರವೇರುವುವು ಎಂದು ಹೇಳಿದ್ದರಿಂದ ಈ ಹೊತ್ತಿನ ವರೆಗೆ ಪೂಜಿಸುತ್ತಾ ಬರುವ ಪದ್ಧತಿ ಬಿದ್ದದಷ್ಟೇ? "ಅದೃಶ್ಯೋ ರೂಪ್ಯಪೀಠೇಽಸ್ತಿ ದೃಶ್ಯಸ್ತು ಬದರೀ ತಟೇ" ಎಂಬ ಪ್ರಮಾಣಾನುಸಾರಿಯಾಗಿದೆ ಪೂರ್ವೋಕ್ತ ಸಂಗತಿಗಳು ಎಂದು ತಿಳಿಯಬೇಕು. ಯಾರೇ ಏನೇ ಹೇಳಲಿ, ಪಾಠ ಹೇಳುವಾಗ ಶರೀರ ಸಮೇತ ಅದೃಶ್ಯರಾದರೆಂಬ ಮಾತು ಸರ್ವಥಾ ಸ್ವೀಕಾರಾರ್ಹವಲ್ಲ. ಮಧ್ವವಿಜಯದಲ್ಲಿಯೂ ಹೇಳಲಿಲ್ಲ.

"ಶ್ರೀಮಧ್ವೋ ವಿಜಯೀಽಜ ಮಧ್ವವಿಜಯೋ ನಾರಾಯಣ ಪ್ರೋದ್ಭವಃ" ಎಂಬ ಮಣಿಮಂಜರೀ ಶ್ಲೋಕದಲ್ಲಿ ಶ್ರೀಮಧ್ವಾಚಾರ್ಯರ ತಂದೆ ನಡ್ಡಿಲ್ಲಂತಾಯ ನಾರಾಯಣ ಭಟ್ಟರು ಎಂತ ಲೋಕಪ್ರಸಿದ್ಧ ಹೆಸರನ್ನು ಹೇಳಿದ್ದಾರೆ. ಶ್ಲೋಕಾರ್ಥ "ವಿಜಯಶೀಲ ರಾದ ಮಧ್ವಾಚಾರ್ಯರೂ, ಶ್ರೀಮಧ್ವವಿಜಯವೂ ನಾರಾಯಣನಿಂದ ಹುಟ್ಟಿದ್ದು" ಮಧ್ವವಿಜಯ ಕಾವ್ಯವನ್ನು ನಾರಾಯಣ ಪಂಡಿತಾಚಾರ್ಯರು ಮಾಡಿದ್ದಾರೆ. ಹಾಗೂ ಶ್ರೀಮಧ್ವಾಚಾರ್ಯರು ನಡ್ಡಿಲ್ಲಂತಾಯ ನಾರಾಯಣ ಭಟ್ಟರಿಂದ ಹುಟ್ಟಿರುತ್ತಾರೆ ಅಂತ ಇರುತ್ತದೆ. ಆದುದರಿಂದ ಶರ್ಮರು ಪು. 79ರಲ್ಲಿ "ಇವರ, ಶ್ರೀಮಧ್ವಾಚಾರ್ಯರ ತಂದೆಯ ಸರಿಯಾದ ಹೆಸರು ಎಲ್ಲಿಯೂ ತಿಳಿದುಬರುವುದಿಲ್ಲವೆಂದು ಬರೆದಿರುವುದು" ತಿಳಿಯಲು ಶ್ರಮಪಡದೆನೇ ಬರೆದದ್ದಾಗಿದೆ. "ನೈಷಃ ಸ್ಥಾಣೋರಪರಾಧಃ ಯದೇನ- ಮಂಧೋ ನ ಪಶ್ಯತಿ" ಕುರುಡನು ಕಂಬವನ್ನು ಕಾಣದೆ ಇರುವುದು ಕಂಬದ ತಪ್ಪಲ್ಲ. ಎಂಬ ಗಾದೆ ಮಾತಿದೆ, ಶರ್ಮರು ಶ್ರೀಮಧ್ವಾಚಾರ್ಯರ ತಂದೆಯ ಹೆಸರು ತಿಳಿದು ಕೊಳ್ಳಲು ಪ್ರಯತ್ನ ಮಾಡದೆ ಅವರಿಗೆ ಸರಿಯಾಗಿ ಹೆಸರು ಹೇಳಲು ಬರುವ ತಂದೆ ಇರ ಲಿಲ್ಲವೆಂದು ಸತ್ಯಾಪಲಾಪ ಮಾಡಿ ಮುಂದೆ ಸರಿಯಾಗಿ ಹೆಸರು ಹೇಳಲು ಬಾರದೆ ಇರುವ ತಂದೆಯವರಿಂದ ಹುಟ್ಟಿದ್ದಾರೆ, ಎಂಬುದಾಗಿ ಅಸತ್ಯವಿಧಾನ ಬೇರೆ ಮಾಡಿ ದ್ದಾರೆ. ಶ್ರೀಮಧ್ವಾಚಾರ್ಯರ ತಂದೆಯಾದ ನಾರಾಯಣ ಭಟ್ಟರು ಆ ಕಾಲದಲ್ಲಿ ಜನರಿಗೆ ಮಾನ್ಯ ವ್ಯಕ್ತಿಯಾದುದರಿಂದ ಕುಲದ ಹೆಸರಿನಿಂದಲೇ ಕರೆಯುತ್ತಿದ್ದರು. "ಗುರೋರ್ನಾಮ ನ ಗೃಹ್ಣೀಯಾತ್" ಎಂಬಂತೆ ಅವರ ವ್ಯಕ್ತಿ ಹೆಸರನ್ನು ಹೇಳುತ್ತಿರ ಲಿಲ್ಲವಷ್ಟೇ? ಹೆಸರೇ ಇಲ್ಲವೆಂದಲ್ಲ.

ಪು. 80ರಲ್ಲಿ ಶ್ರೀವ್ಯಾಸಕೃತ ಉಪಪುರಾಣಗಳೊಳಗೊಂದಾದ ಸೌರ ಪುರಾಣ ವೆಂದು ಬರೆಯುತ್ತಾರೆ ಶರ್ಮರು. ಶರ್ಮರಿಗೆ ಪುರಾಣಗಳ ಪರಿಚಯವಿರುವುದಿಲ್ಲ ವೆಂದು ಇದರಿಂದ ವ್ಯಕ್ತವಾಗುತ್ತದೆ. ಪುರಾಣಗಳು 18 ವೇದವ್ಯಾಸರಿಂದ ರಚಿತ ವಾಗಿವೆ. ಅವನ್ನು ಶ್ರವಣ ಮನನ ಮಾಡಿ ಇತರ ಋಷಿಗಳು ಉಪಪುರಾಣ ಗಳನ್ನು ಬರೆದರು. ಹೀಗೆ ಮತ್ಸ್ಯಪುರಾಣದ "ಅನ್ಯಾನ್ಯುಪಪುರಾಣಾನಿ ಮುನಿಭಿಃ ಕಥಿತಾನಿ ಚ | ಅಷ್ಟಾದಶಪುರಾಣಾನಿ ಶ್ರುತ್ವಾ ಸಂಕ್ಷೇಪತೋ ದ್ವಿಜಾಃ ||" ಈ ಶ್ಲೋಕದಿಂದ ಗೊತ್ತಾಗುತ್ತದೆ. ಪುಟ 82ರಲ್ಲಿ ಸಹ್ಯಾದ್ರಿಖಂಡದ ಸನತ್ಕುಮಾರ ಸಂಹಿತೆ ಉಕ್ತವಾಗಿದೆ. ಆದರೆ ಇದೇ ಪುಸ್ತಕದ ಆರಂಭದಲ್ಲಿ ಉಕ್ತವಾದಂತೆ ಸನತ್ಕು ಮಾರ ಸಂಹಿತೆಯ 4ನೇ ಖಂಡ, ಸಹ್ಯಾದ್ರಿಯೆಂದು ತಿಳಿಯುತ್ತದೆ. ಅಂತೂ ಈ ಎರಡು ಗ್ರಂಥಗಳ ಆಧಾರದಿಂದ ಶರ್ಮರು ಮಧು ಎಂಬಾತನನ್ನು ಮಧ್ವಾಚಾರ್ಯ ರನ್ನು ಮಾಡುವ ಹವ್ಯಾಸವನ್ನು ಪು. 80, 82 ವರೇಗೆ ಬರೆದು ತೋರಿಸುತ್ತಾರೆ. ಹರಿ ಮತ್ತು ಹರರು ಒಂದು ಆಗಬೇಕೆಂಬಂತೇನೇ ಮಧು ಮತ್ತು ಮಧ್ವ ಇವರಿಬ್ಬರೂ ಒಂದಾಗಬೇಕೆಂದು ಈ ಅದ್ವೈತಿಗಳ ಅಪೇಕ್ಷೆ ಮಾತ್ರ. ಮಧು ಎಂದು ಉಕಾರಾಂತ ಶಬ್ದ ಒಬ್ಬರ ಹೆಸರಾದರೆ ಮತ್ತೊಬ್ಬರ ಹೆಸರು ಅಕಾರಾಂತ ಮಧ್ವ ಎಂದಾಗಿದೆ. "ಸಪ್ತ ರಸ್ಯಸ್ಯರೂಷೀರ್ವಾವಶಾನೊ ವಿದ್ವಾನ್ ಮಧ್ವ ಉಜ್ಜಬಾರ ದೃಶೆ ಕಂ" ಎಂಬ ಶ್ರುತಿಯಲ್ಲಿ ವಿದ್ವಾನಾದ ಮಧ್ವರು ಸ್ವೇಚ್ಛೆಯಂತೆ "ಅಪೌರುಷೇಯ ವೇದಗಳು 4 ಪೌರುಷೇಯವಾದ ಪಂಚರಾತ್ರ, ಮೂಲರಾಮಾಯಣ, ಮಹಾಭಾರತಗಳು 3" ಹೀಗೆ 7 ಗ್ರಂಥಗಳನ್ನು ಸುಖಪ್ರಾಪ್ತಿ ಸಲುವಾಗಿ ತತ್ವಜ್ಞಾನವಾಗಬೇಕೆಂದು ಉದ್ಧಾರಮಾಡಿ ತೋರಿಸಿಕೊಟ್ಟರು" ಎಂದು ಅಕಾರಾಂತ ಮಧ್ವಪದವಿದೆ. "ಉರುಕ್ರಮಸ್ಯ ಸ ಹಿ ಬಂಧು ರಿತ್ಥಾ ವಿಷ್ಣೋಃ ಪದೆ ಪರಮೆ ಮಧ್ವ ಉತ್ಸಃ" ಎಂಬ ಶ್ರುತಿಯಲ್ಲಿ ನಾರಾಯಣನ ಮುಖ್ಯ ಬಂಧುವೆಂದು ಪ್ರಸಿದ್ಧನಾದ ಮಧ್ವನು ವಿಷ್ಣುವಿನ ಪರಮ ಪದದಲ್ಲಿ ಉತ್ಸಾಹ ಯುಕ್ತನಾಗಿರುವನು ಎಂದು ಅಕಾರಾಂತ ಮಧ್ವಪದವಿರುತ್ತದೆ. ಹೀಗೆ ಅನೇಕ ಋಗ್ವೇದ ವಾಕ್ಯಗಳಲ್ಲಿ ಮಧ್ವ ಎಂಬ ಅಕಾರಾಂತ ಪದಗಳನ್ನು ಕಂಡು "ಮಧ್ವವೆಂಬ ಹೆಸರು ಋಗ್ವೇದ ಮಂತ್ರದಿಂದ ಸಿದ್ಧವಾಗಿದೆ", "ಮಧ್ವಾಖ್ಯಂ ಮಂತ್ರಸಿದ್ಧಂ" ಎಂದು ಹೇಳಿರುವರು. ಯದ್ಯಪಿ ಮಧು + ಆಚಾರ್ಯ = ಮಧ್ವಾಚಾರ್ಯ, ಯಣ್ ಸಂಧಿ; ಮಧ್ವ + ಆಚಾರ್ಯ = ಮಧ್ವಾಚಾರ್ಯ, ಸವರ್ಣದೀರ್ಘ ಸಂಧಿ ಇವುಗಳಿಂದ "ಮಧ್ವಾಚಾರ್ಯ"ಪದ ಸಮಾನವಾಗಬಹುದಾದರೂ ಮೂಲಶಬ್ದ ಮಧು ಮತ್ತು ಮಧ್ವ ಶಬ್ದಗಳು ಆಕಾರಬೇಧದಿಂದ ಮತ್ತು ಅರ್ಥಬೇಧದಿಂದ ಬೇರೆಯೇ ಆಗುತ್ತದೆ. ಹೆಸರೇ ಬೇರೆಬೇರೆಯಾಗಿರುವಾಗ ವ್ಯಕ್ತಿ ಒಂದೇ ಎಂದು ಸಾಧಿಸಲು ಹೊರಟದ್ದು ಅತ್ಯಂತ ಸಾಹಸ. "ಶಬ್ದಭೇದಾದರ್ಥಭೇದಃ" ಕೂಪಃ, ಯೂಪಃ, ಸೂಪಃ ಎಂದು ಶಾಸ್ತ್ರದಲ್ಲಿ ಒಂದಕ್ಷರ ವ್ಯತ್ಯಾಸದಿಂದ ಭಾವಿ, ಕಂಬ, ತೋವೆ ಎಂಬ ಅರ್ಥಭೇದ ತೋರಿಸಿದ್ದಾರೆ. ಆದುದರಿಂದ ಪುರಾಣದ ಮಧು, ಋಗ್ ವೇದದ ಮಧ್ವ ಒಂದಲ್ಲ.

| ಪುರಾಣದ ಮಧು | ಋಗ್ವೇದದ ಮಧ್ವ |
|---|---|
| 1. ಆದ್ಯ ಶಂಕರಾಚಾರ್ಯರ ಸಾಕ್ಷಾತ್ ಶಿಷ್ಯರು ಪದ್ಮಪಾದರು. ಅವರ ಶಿಷ್ಯ ಮಧು. ಆದುದರಿಂದ ಆದಿಶಂಕರರ ಸಮಾನಕಾಲದ ಪದ್ಮಪಾದರ ಕಾಲದವರು. ಅಂದರೆ ಶಾ. ಶ. 500 ನಂತರದವರು. ಪು. 72ರಲ್ಲಿ "ಆದಿಶಂಕರರ ಕಾಲದ ನಂತರ ಸಾಧಾರಣ 600 ವರ್ಷಗಳ ತರುವಾಯ ಶ್ರೀಮಧ್ವಾಚಾರ್ಯರು" ಇದೆ . . | ಶಾ. ಶ. 1121ರಿಂದ 1200 ವರೆಗೆ ಶ್ರೀಮಧ್ವಾಚಾರ್ಯರು |
| 2. ಜನ್ಮನಾಮ ಮಧು ಉಕಾರಾಂತ. ಶ್ಲೋಕ ೩೩. ಇತರ ಯಾವ ಹೆಸರೂ ಕಂಡು ಬರುವುದಿಲ್ಲ . . | ಜನ್ಮನಾಮ ವಾಸುದೇವ, ಸನ್ಯಾಸ ನಾಮ ಪೂರ್ಣಪ್ರಜ್ಞ, ಪಟ್ಟಾಭಿಷೇಕ ನಾಮ ಮಧ್ವ, ಆನಂದತೀರ್ಥ |
| 3. ಪದ್ಮಪಾದುಕ ಆಚಾರ್ಯ, ಗುರು. ಶ್ಲೋಕ ೩೪ . . | ಅಚ್ಯುತಪ್ರೇಕ್ಷಾಚಾರ್ಯ—ಗುರು |
| 4. ತಪಸ್ವೀ ಬ್ರಾಹ್ಮಣ ತಂದೆ. ಶ್ಲೋಕ ೪೦ | ನಾರಾಯಣ ಭಟ್ಟ, ನಡ್ಡಿಲ್ಲಂತಾಯ ತಂದೆ |
| 5. ವಿಧವಾ ತಾಯಿ. ಶ್ಲೋಕ ೪೦ | —ವೇದವತೀ ದೇವಿ—ತಾಯಿ, ಮುತ್ತೈದೆ |
| 6. ಮಧು ವಸಂತನ ಅವತಾರ. ಶ್ಲೋಕ೩೩ | ಶ್ರೀಮಧ್ವಾಚಾರ್ಯರು ವಾಯುದೇವರ ಅವತಾರ |
| 7. ಮಧು ಗುರುಗಳನ್ನು ಸಿಟ್ಟಿಗೆಬ್ಬಿಸಿ, ಗುರು ಕಡೆಯಿಂದ ಶಾಪ ಪಡೆದನು. ಶ್ಲೋಕ ೪೭ರಿಂದ . . . | ಮಧ್ವರು ಗುರುಗಳನ್ನು ಆನಂದಗೊಳಿಸಿ ಅನುಗ್ರಹ ಪಡೆದರು. ಮಧ್ವವಿಜಯ ೯ ಸರ್ಗ ೩೦ ಶ್ಲೋಕ |
| 8. ಮಧು ಪಾಪಿಷ್ಠ, ಯಾಗ ದ್ವೇಷಿ, ಆಸ್ತಿಕ ವರ್ಜಿತ. ಶ್ಲೋಕ ೩೫ . | ಶ್ರೀಮಧ್ವರು ಸದಾಚಾರ ನಿರತ, ಸದಾಚಾರ ಸ್ಮೃತಿ ಗ್ರಂಥಕರ್ತ, ಯಾಗ ಮಾಡಿಸಿದರು, ಕರ್ಮನಿರ್ಣಯ ಗ್ರಂಥ ಕರ್ತರು. ಮ. ಸ. ೯ |

| | |
|---|---|
| 9. ಎಲ್ಲಿಯವರೆಂಬ ಉಲ್ಲೇಖವಿಲ್ಲ. ಪದ್ಮ ಪಾದುಕರು ಇದ್ದುದು ಪೂರ್ವ, ಆದುದರಿಂದ ಅವರ ಶಿಷ್ಯ ಪೂರ್ವ ಸಮುದ್ರ ತೀರದವರು . . . | ಶ್ರೀಮಧ್ವರು ದಕ್ಷಿಣ ಕನ್ನಡ ಜಿಲ್ಲೆ ಉಡುಪಿಯವರು. ಪಶ್ಚಿಮ ಸಮುದ್ರ ತೀರದವರು. |

ಹೀಗೆ ಅನೇಕ ರೀತಿಯ ವೈಷಮ್ಯವಿರುವುದರಿಂದ ಸೌರ ಪುರಾಣದ ಮಧ್ವನ್ನು ಶ್ರೀಮಧ್ವಾಚಾರ್ಯರನ್ನಾಗಿ ಮಾಡಿ ತೋರಿಸುವುದು ಹುಚ್ಚುತನವೇ ಸೈ. ಮತ್ತು ಸೌರ ಪುರಾಣದ ಮೂಲಪ್ರತಿಗಳಲ್ಲಿ ಶರ್ಮರು ತೋರಿಸುವ 39, 40ನೇ ಅಧ್ಯಾಯಗಳು ಇರುವುದಿಲ್ಲ. ಅದನ್ನು ಶ್ರೀಉತ್ತರಾದಿ ಮಠದ ಶ್ರೀ ೧೦೦೮ ಸತ್ಯಧ್ಯಾನರು ಫೋಟೊ ತೆಗೆಸಿ ಇಟ್ಟುಕೊಂಡಿದ್ದಾರೆ. ಇತ್ತೀಚೆಗೆ ಕೆಲವರು ಆ 2 ಅಧ್ಯಾಯ ತಯಾರಿಸಿ, ಛಾಪಿಸಿ, ಮಧ್ವಾಚಾರ್ಯರ ವಿರುದ್ಧ ಅಪಪ್ರಚಾರ ಮಾಡುತ್ತಾರೆಯಷ್ಟೇ? ಇದರಲ್ಲಿ ಏನೂ ಅರ್ಥವಿಲ್ಲ.

ಪು. 6ರಲ್ಲಿ ಶರ್ಮರು ಶೈವಾಗಮದಂತೆ ಪೂಜೆ ಮಾಡಲು ಶಿವಳ್ಳಿಯವರಿಗೆ ಗೊತ್ತಿಲ್ಲ. ಕೇವಲ ಸಾಲಿಗ್ರಾಮ ಪೂಜೆ ಮಾತ್ರ ಗೊತ್ತಿದೆ. ಆದುದರಿಂದ ಸರ್ವತ್ರ ದೇವಾಲಯಗಳಲ್ಲಿ ಸಾಲಿಗ್ರಾಮ ಇಟ್ಟುಕೊಂಡೇ ಪೂಜೆ ಮಾಡುತ್ತಾರೆ. ಎಂದು ಮುಂತಾದ್ದಾಗಿ ಮಾಧ್ವರನ್ನು ಅಪಹಾಸ ಮಾಡಲು ಹೊರಟಿದ್ದಾರೆ. ಇದೀಗ ಶರ್ಮರ ಕೂಡ ಒಂದು ಪ್ರಶ್ನೆಯನ್ನು ವಿಚಾರಿಸಬೇಕಾಗಿದೆ—ಅದೇನೆಂದರೆ, ಶೈವಾಗಮವು ವೇದದಂತೆ ಮುಖ್ಯ ಪ್ರಮಾಣವೋ ಹೇಗೆ? ಮತ್ತು ನಿಮ್ಮ ಗುರುಗಳೆಂದು ಒಪ್ಪಿಕೊಂಡಿರುವ ಆದಿಶಂಕರಾಚಾರ್ಯರು ಶೈವಾಗಮವು ವೇದಸಮಾನವೆಂದು ಒಪ್ಪುತ್ತಾರೋ. ಹೇಗೆ, ಶೈವಾಗಮವನ್ನು ಬ್ರಹ್ಮಸೂತ್ರದಲ್ಲಿ ಶ್ರುತಿಸಮಾನವಾಗಿ ಉದಾಹರಿಸಿದ ಸ್ಮೃತಿ ಎಂಬುದಾಗಿ ಹೇಳಿದ್ದಾರೋ ಹೇಗೆ? ಯಾವುದಕ್ಕೂ ಇಲ್ಲವೆಂಬುದೊಂದೇ ಉತ್ತರವಲ್ಲದೆ ಬೇರೆ ಇರುವುದಿಲ್ಲ. ಬ್ರಹ್ಮಸೂತ್ರದ 2ನೇ ಅಧ್ಯಾಯದ 2ನೇ ಪಾದದಲ್ಲಿ ಶೈವಾಗಮ ಖಂಡನೆ ಇದೆ. ಅದಕ್ಕೆ ಭಾಷ್ಯ ಮಾಡುತ್ತಾ ಆದಿಶಂಕರರು ಶೈವಾಗಮವನ್ನು ಅಕ್ಷರಶ ಖಂಡಿಸಿ ವ್ಯಾಖ್ಯಾನ ಬರೆದಿರುತ್ತಾರೆ. ವಿದ್ಯಾರಣ್ಯಕೃತ ಶಂಕರವಿಜಯದಲ್ಲಿ ಶಂಕರಾಚಾರ್ಯ ಕೃತ ಶೈವಾಗಮ ಖಂಡನೆ ಕಂಡುಬಂದದೆ. ಗೀತಾಪ್ರಸ್ಥಾನದಲ್ಲಿ ಸಹ ಶೈವಾಗಮದ ಪುರಸ್ಕಾರವಿಲ್ಲ. ಶ್ರೀಮದ್ಗೀತೆಯು ಪಂಚರಾತ್ರಮೂಲವೆಂಬುದನ್ನು "ಇಮಂ ವೈವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ" ಇತ್ಯಾದಿ 4ನೇ ಅಧ್ಯಾಯದ ಆರಂಭದಿಂದ ತಿಳಿಯಬಹುದಾಗಿದೆ. ರಾತ್ರಿ ಹಗಲು ಇದ್ದಂತೆ ಇರುವ ಶೈವಾಗಮ ಪಂಚರಾತ್ರಾಗಮಗಳಿಗೆ ಪರಸ್ಪರ ಸಾಮರಸ್ಯ ಇರಲಾರದು ಅಂದ ಮೇಲೆ ಶೈವಾಗಮ ಗೀತಾಪ್ರಸ್ಥಾನ ವಿರುದ್ಧವೆಂದೇ ತೀರ್ಮಾನಿಸಬಹುದು. ಉಪನಿಷತ್ ಪ್ರಸ್ಥಾನದ ವಿವರಣವೇ ಬ್ರಹ್ಮಸೂತ್ರವಾದುದರಿಂದ, ಸೂತ್ರವಿರುದ್ಧವೆಂದು ನಿರ್ಣೀತವಾದ ಶೈವಾಗಮವು ವೇದವಿರುದ್ಧವೆಂತಲೂ ತೀರ್ಮಾನಿಸುವಂತಿದೆ. ಅಂತೂ ಪ್ರಸ್ಥಾನತ್ರಯ ವಿರುದ್ಧ ಶೈವಾಗಮವನ್ನು ವೈದಿಕರಾರೂ ಆರಿಸಬಾರದೆಂದು ಶಂಕರಾಚಾರ್ಯರ ಪ್ರಸ್ಥಾನತ್ರಯ

ನಿಮರ್ತೆಯಿಂದ ನಿರ್ಣೀತವಾಯಿತು. ಮಾಧ್ವರು ಸಹ ಶೈವಾಗಮವನ್ನು ಅನುಸರಿಸಿಲ್ಲವೆಂಬುದರಿಂದ ಯಾವ ಹಾನಿಯೂ ಇಲ್ಲ.

ಪ್ರಸ್ಥಾನತ್ರಯದ ಪೈಕಿ ಒಂದಾದ ಗೀತೆಯಲ್ಲಿ "ಇತರ ದೇವತೆಗಳ ಭಕ್ತರಾದವರು ದೇವತೆಗಳನ್ನು ಶ್ರದ್ಧಾಪೂರ್ವಕ ಯಾಗ ಮಾಡಿದರೂ ಅದೆಲ್ಲಾ ನನ್ನನ್ನೇ ಕುರಿತು ಸೇರುತ್ತದೆ ಯಾದರೂ ಅದು ವಿಧಿಪೂರ್ವಕವಾಗುವುದಿಲ್ಲ. ಆದುದರಿಂದ ನಶ್ವರಫಲವೇ ಸಿಗುತ್ತದೆ. ಸಕಲ ಯಾಗ ಪೂಜೆಗಳಿಗೂ ಭೋಕ್ತಾ ಮತ್ತು ಪ್ರಭು ನಾನೇ ಇರುವೆನು, ಅದನ್ನು ಸರಿಯಾಗಿ ಯಾರು ತಿಳಿಯುವುದಿಲ್ಲವೋ ಅವರು ಆ ಯಾಗ ಪೂಜೆಗಳ ಫಲವನ್ನು ಪೂರಾ ಅನುಭವಿಸದೆ ಮಧ್ಯೆ ಚ್ಯುತರಾಗುತ್ತಾರೆ, ಆದುದರಿಂದ ನೀನು ಏನು ಮಾಡಿದರೂ ಅದನ್ನೆಲ್ಲಾ ನನಗೇನೇ ಅರ್ಪಿಸು, ಹೀಗೆ ಕೃಷ್ಣನು ಹೇಳಿರುವನು. ಆದುದರಿಂದ ಮಾಧ್ವರು ಇತರ ದೇವಾಲಯಗಳಲ್ಲಿ ಪೂಜೆ ಮಾಡಿ ಕೃಷ್ಣನಲ್ಲಿ ಅರ್ಪಿಸಲು ಸಾಲಿಗ್ರಾಮವನ್ನು ತಂದಿಡುತ್ತಾರೆ. ಇದು ಪ್ರಸ್ಥಾನತ್ರಯ ಸಮ್ಮತವಾದ ಆಚಾರ. ಇದು ಶಾಸ್ತ್ರಾಭ್ಯಾಸ ಇರದ ಶರ್ಮರಿಗೆ ಏನು ಗೊತ್ತು? ಮಾಧ್ವ ದ್ವೇಷದಿಂದ ಏನೇನೋ ಬರೆಯುತ್ತಾರೆ.

"ವಿಷ್ಣುಮುಖಾವೈದೇವಾಃ" ದೇವತೆಗಳಿಗೆಲ್ಲಾ ಮುಖಂಡನು ವಿಷ್ಣುವೇ ಆಗಿರುವನು. "ಅಗ್ನಿರ್ವೈದೇವಾನಾಮವಮೋ ವಿಷ್ಣುಃ ಪರಮಃ ತದಂತರೇಣ ಅನ್ಯಾಃ ಸರ್ವಾಃ ದೇವತಾಃ" ದೇವತೆಗಳೊಳಗೆ ಅಗ್ನಿಯೇ ಕಡಿಮೆಯವನು, ವಿಷ್ಣುವೇ ಶ್ರೇಷ್ಠನು ಅವರಿಬ್ಬರ ನಡುವೆ ಇತರ ಎಲ್ಲಾ ದೇವತೆಗಳೂ ಎಂಬಿತ್ಯಾದಿ ವೇದವಾಕ್ಯಗಳಿಂದ ವಿಷ್ಣು ಸರ್ವೋತ್ತಮತ್ವವು ಸಿದ್ಧವಾಗುತ್ತದೆ.

"ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣ ಹಿತಾಯ ಚ |
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ||

ಎಂಬುವ ಭಾರತದ ಶ್ಲೋಕದಲ್ಲಿ ಬ್ರಾಹ್ಮಣ ಕುಲದ ದೇವತೆಯಾದ ಕೃಷ್ಣನನ್ನು ಆದಿ ಶಂಕರರು ತಮ್ಮ "ಪ್ರಬೋಧ ಸುಧಾಕರ" ಎಂಬ ಪ್ರಕರಣದ ಆರಂಭದಲ್ಲಿ "ಜಯತಿ ಕುಲದೇವೋಯದುಪತಿಃ" ಬ್ರಾಹ್ಮಣರ ಕುಲದೇವನೆಂದು ಹೇಳಿರುವರು. ಪ್ರಸ್ಥಾನ ತ್ರಯದಲ್ಲೊಂದಾದ ಗೀತಾಪ್ರಸ್ಥಾನವು ಶುದ್ಧ ವೈಷ್ಣವ ಧರ್ಮವನ್ನು ನಿರೂಪಣೆ ಮಾಡಿಯದೆ. ಆದಿಶಂಕರರ ಶಿಷ್ಯರ ಪೈಕಿ ಶ್ರೀಹಸ್ತಾಮಲಕರು ಮತ್ತು ಪದ್ಮಪಾದರೆಂಬ ಇಬ್ಬರು ವೈಷ್ಣವಧರ್ಮ ಪ್ರಚಾರಕರೆಂದು ಆನಂದಗಿರಿಕೃತ ಶಂಕರವಿಜಯದಿಂದ ತಿಳಿಯುತ್ತದೆ. ಅವರೀರ್ವರೂ ತಪ್ತಮುದ್ರಾಧಾರಣವನ್ನು ಮಾಡಿಸುತ್ತಿದ್ದರು, ಎಂದು ಅದೇ ಶಂಕರವಿಜಯದಿಂದ ತಿಳಿಯುತ್ತದೆ. ಆದುದರಿಂದ ವೈಷ್ಣವಧರ್ಮವು ಬ್ರಾಹ್ಮಣರಿಗೆ ಯುಕ್ತವಾದದ್ದಾಗಿರುತ್ತದೆ.

ವೈಷ್ಣವರು ವೈದಿಕ ಸಕಲ ದೇವತೆಗಳನ್ನು ಯಥಾಯೋಗ್ಯ ವೈದಿಕರೀತ್ಯಾ ಪೂಜೆ ಮಾಡುತ್ತಾರೆ. ಆ ರೀತಿಯ ಪೂಜೆಯೇ ವೈದಿಕವಾದುದರಿಂದ ದೇವತೆಗಳ

ಪ್ರೀತಿಗೆ ಕಾರಣವಾಗುತ್ತದೆ. ಇನ್ನು ಶಿವಾಲಯಗಳಲ್ಲಿ ಶೈವಾಗಮ ಬೇಕು, ಸ್ಕಂದಾಲಯಗಳಲ್ಲಿ ಸ್ಕಂದಾಗಮ ಬೇಕು. ದುರ್ಗಾಲಯಗಳಲ್ಲಿ ಶಾಕ್ತಾಗಮ ಬೇಕು, ಎಂಬ ತಿಳುವಳಿಕೆ ತಪ್ಪು.

ವ್ಯವಸಾಯಾತ್ಮಿಕಾಬುದ್ಧಿ ರೇಕೈವ ಕುರುನಂದನ |
"ಬಹುಶಾಖಾಹ್ಯನಂತಾಶ್ಚ ಬುದ್ಧಯೋಽ ವ್ಯವಸಾಯಿನಾಂ ||

ಎಂಬ ಗೀತಾಶ್ಲೋಕದಲ್ಲಿ ಸ್ಪಷ್ಟವಾಗಿ ವೇದೋಕ್ತ ಒಂದೇ ಪದ್ಧತಿ ಜ್ಞಾನಿರಿಗೆ, ಪಾಮರರಿಗೆ ಬಹು ಶಾಖೆಗಳು ಮತ್ತು ಅನೇಕಾಗಮಗಳು ಎಂಬಿತ್ಯಾದಿ ವಿಷಯನಿರೂಪಣೆ ಮಾಡಿದುದನ್ನು ಕಾಣಬಹುದು. ಆದುದರಿಂದ ಮಾಧ್ವರು ಶಿವಾಲಯಗಳಲ್ಲಿ ಪೂಜೆ ಮಾಡುತ್ತಾ ತಾರತಮ್ಯಾನುಸಾರ ಆರಾಧನೆ ಮಾಡುವುದರಿಂದ ದೇವತಾಪಚಾರವಾಗುವುದಿಲ್ಲ. ಯೋಗ್ಯ ಸೇವೆಯೇ ಆಗುತ್ತದೆ.

ಶ್ರೀಮಧ್ವಾಚಾರ್ಯರೇ ಆಗಲಿ, ಅವರ ಶಿಷ್ಯರಾದ ಮಾಧ್ವರೇ ಆಗಲಿ, ಶರ್ಮರು ತಿಳಿದಂತೆ, ಶಿವದ್ವೇಷಿಗಳಲ್ಲ, ಮಾಧ್ವರು ಶಿವಭಕ್ತರಿದ್ದಾರೆ. ಶ್ರೀಮಧ್ವಾಚಾರ್ಯರು ತಂತ್ರಸಾರವೆಂಬ ಗ್ರಂಥದಲ್ಲಿ ಶಿವ, ಗಣಪತಿ, ದುರ್ಗಾ, ಸೂರ್ಯ, ಸ್ಕಂಧ, ಮೊದಲಾದ ವೈದಿಕ ದೇವತೆಗಳಾರಾಧನ, ಮಂತ್ರೋದ್ಧಾರ, ದೇವಸ್ಥಾನ ರಚನಾಪ್ರಕಾರ ಪ್ರತಿಮಾಲಕ್ಷಣ, ವಗೈರೆ ಸಶಾಸ್ತ್ರವಾಗಿ ವಿವರಿಸಿ ತಿಳಿಸಿದ್ದಾರೆ. ಅವರ ಶಿಷ್ಯರು ಶಿವಸ್ತುತಿ ವಗೈರೆ ಗ್ರಂಥ ಬರೆದಿದ್ದಾರೆ. ಸೋದೆ ಶ್ರೀವಾದಿರಾಜರು ತೀರ್ಥಪ್ರಬಂಧದಲ್ಲಿ ಅನೇಕ ಕ್ಷೇತ್ರಗಳಲ್ಲಿರುವ ನಾನಾ ದೇವತೆಗಳ ಸ್ತೋತ್ರ ಮಾಡಿರುತ್ತಾರೆ. ಪುರಂದರಾದಿ ದಾಸರಾಯರು ಪದ್ಯ ರಚಿಸಿ ಸ್ತುತಿಸಿದ್ದಾರೆ. ಶರ್ಮರಿಗೆ ಇದು ಯಾವುದೂ ಮಾಧ್ವರ ಪದ್ಧತಿ ತಿಳಿಯದು. ಆದುದರಿಂದ ದೇವೀ ಭಾಗವತ ಮೊದಲಾದ ಗ್ರಂಥಗಳಲ್ಲಿ ಶಿವದ್ವೇಷಿಗಳ ಕುರಿತು ಬರೆದ ಶ್ಲೋಕಗಳನ್ನು ಮಾಧ್ವರ ಮೇಲೆ ಹೊರಿಸಬೇಕೆನ್ನುತ್ತಾರೆ. ಇದು ಶುದ್ಧ ಅನ್ಯಾಯ. ಅಖಿಲ ಮಾಧ್ವರು ಶಿವ, ವಿಷ್ಣು, ದುರ್ಗಾ, ಗಣಪತಿ, ಮೊದಲಾದ ವೈದಿಕ ದೇವತೆಗಳನ್ನು ವೈದಿಕ ಪದ್ಧತಿಯಂತೆ ಪೂಜೆ ಮಾಡುತ್ತಾರೆ.

ಯೇಪ್ಯನ್ಯದೇವತಾ ಭಕ್ತಾಃ ಯಜಂತೇ ಶ್ರದ್ಧಯಾನ್ವಿತಾಃ |
ತೇಽಪಿ ಮಾ ಮೇವ ಕೌಂತೇಯ ಯಜಂತ್ಯ ವಿಧಿ ಪೂರ್ವಕಂ ||

ಎಂದು ಗೀತೆಯಲ್ಲಿ ಅನ್ಯದೇವತಾ ಭಕ್ತರು ಮಾಡುವ ಪೂಜಾಯಾಗಾದಿಗಳು ವಿಧಿಪೂರ್ವಕವಲ್ಲ. ವೈಷ್ಣವರು ವಿಷ್ಣು ಸರ್ವೋತ್ತಮನೆಂದೂ, ಇತರ ದೇವತೆಗಳು ಪರಮಾತ್ಮನ ಪರಿವಾರವೆಂದೂ ತಿಳಿದು ಮಾಡುವ ಪೂಜೆಯೇ, ವಿಧಿಪೂರ್ವಕ ಪೂಜೆ ಎಂದೂ, ಗೀತೋಕ್ತಧರ್ಮವಾಗಿದೆ. ಅದನ್ನೇ ಮಾಧ್ವರು ಮಾಡುತ್ತಾರೆ. ಅದಕ್ಕೆ ಪ್ರಸ್ಥಾನತ್ರಯದ ಸಮ್ಮತಿ ಇದೆ.

ಉಡುಪಿ ಕ್ಷೇತ್ರವು ಶಿವಳ್ಳಿ ಗ್ರಾಮದಲ್ಲಿದೆ. ಶಿವಳ್ಳಿ ಗ್ರಾಮದಲ್ಲಿ ಅಹಿಚ್ಛತ್ರದಿಂದ

ಬಂದು ನೆಲೆಸಿದವರೇ ಶೀವಳ್ಳಿಯವರಾದರು. ಶೀವಳ್ಳಿಯವರ ಕುಲದೇವತೆ ಶ್ರೀಮದ ನಂತೇಶ್ವರನು. ಮತ್ತು ಶ್ರೀಮದನಂತೇಶ್ವರನು ನಾರಾಯಣನು. 7 ನೂರು ವರ್ಷ ಪ್ರಾಚೀನದ ಗ್ರಂಥದಲ್ಲಿ "ನಾರಯಣಂ ಕುಲಪತಿಂ ಶರಣಂ ವ್ರಜೇಮ" ಎಂಬ ಉಕ್ತಿ ಇದೆ. ಇದರಲ್ಲಿ ನಾರಾಯಣನೆಂದೂ, ಕುಲದೇವತೆ ಎಂದೂ, ಹೇಳಿಯದೆ. ಶ್ರೀಮಧ್ವಾ ಚಾರ್ಯರು ಹುಟ್ಟುವುದಕ್ಕಿಂತ ಪೂರ್ವದಲ್ಲಿ ಅವರ ತಂದೆ ತಾಯಿಗಳು ಮಾಡುತ್ತಿರುವ ಉಪಾಸನಾಕ್ರಮವನ್ನು ಸದ್ರಿ ಶ್ಲೋಕವು ತಿಳಿಸುತ್ತದೆ. ಲಿಂಗ ಕಾಣುತ್ತಿದೆ ಎಂಬುದಾಗಿ ಶಿವನೆಂದು ಹೇಳಬೇಕಾಗಿಲ್ಲ. ಕೊಡವೂರಲ್ಲಿ ಶಂಕರನಾರಾಯಣಲಿಂಗ, ಇಂದ್ರಾಳಿ ಯಲ್ಲಿ ದುರ್ಗಾಲಿಂಗ, ಕೊಲ್ಲೂರಲ್ಲಿ ಮೂಕಾಂಬಿಕಾಲಿಂಗ, ಕಡೆಶಿವಾಲಯದಲ್ಲಿ ನರಸಿಂಹ ಲಿಂಗ, ಗೋವೆ ಜಾಂಬಾವಲಿಯಲ್ಲಿ ದಾಮೋದರ ಲಿಂಗ. ಹೀಗೆ ಶಿವನ ಲ್ಲದೆ, ಬೇರೆ ದೇವತೆಗಳ ಲಿಂಗವೂ ಇರುತ್ತವೆ. ಮತ್ತು ಶೀವಳ್ಳಿಯವರು ಶಿವಲಿಂಗ ವನ್ನು ಪೂಜಿಸುವವರಲ್ಲವೆಂತಲ್ಲ. ಚಂದ್ರಮೌಳೀಶ್ವರ ದೇವಾಲಯದಲ್ಲಿ ಶಿವನೆಂದೇ ಪೂಜಿಸುತ್ತಾರೆ. ಎಲ್ಲೂರು, ಪುತ್ತಿಗೆ, ಪಡುಬಿದ್ರಿ, ಪುತ್ತೂರು ಮೊದಲಾದ ಕಡೆಗಳಲ್ಲಿ ಶಿವನೆಂದೇ ಶಿವಲಿಂಗವನ್ನು ಪೂಜಿಸುತ್ತಾರೆ. ಹೀಗಿರುವಾಗ ಅನಂತೇಶ್ವರನೂ ಶಿವನೇ ಆಗಿದ್ದರೆ ಶಿವನೆಂದೇ ಏಕೆ ಆರಾಧಿಸಬಾರದಾಗಿತ್ತು. ಶಿವನಲ್ಲ, ನಾರಾಯಣನೇ ಇರು ತ್ತಾನೆ. ಅಂತೆಯೇ ನಾರಾಯಣನೆಂದು ಉಪಾಸಕ ವರ್ಗವು ಆರಾಧಿಸುತ್ತದೆ.

ಮತ್ತು ಉಡುಪಿ ಕ್ಷೇತ್ರವು ವೈಷ್ಣವ ಕ್ಷೇತ್ರವು. ವೈಷ್ಣವ ಮತಪ್ರಚಾರಕರಾದ ಶ್ರೀಹಸ್ತಾಮಲಕರು ತನ್ನ ವೈಷ್ಣವ ಮತಪ್ರಚಾರಕ್ಕೆ ಕೇಂದ್ರಸ್ಥಾನವನ್ನಾಗಿ ಇರಿಸಿ ಕೊಂಡಿದ್ದಾರೆಂದು ಅಚ್ಯುತಶರ್ಮರು ಒಪ್ಪಿದ್ದಾರೆ. ಅಲ್ಲಿಯೇ ಕೃಷ್ಣನನ್ನು ಸ್ಥಾಪನೆ ಮಾಡಿ ತನ್ನ ಮುಖ್ಯ ಕೇಂದ್ರವನ್ನಾಗಿ ಮಾಡಿದ್ದಾರೆ. ಉತ್ತರ ಸಹ್ಯಾದ್ರಿಯಲ್ಲಿ ಅನೇಕ ವೈಷ್ಣವ ಸನ್ಯಾಸಿಗಳು ಅನಂತೇಶ್ವರನ ಸನ್ನಿಧಿಯಲ್ಲಿ ತಪಸ್ಸು ಮಾಡುತ್ತಿದ್ದ ಸಂಗತಿಯನ್ನು ತಿಳಿಸಿರುತ್ತದೆ. ಅಹಿಚ್ಛತ್ರದಿಂದ ಬಂದವರಲ್ಲಿ ಶೈವರು ಗೋಕರ್ಣಾದಿ ಶೈವಕ್ಷೇತ್ರದಲ್ಲಿ ನಿಂತರು. ವೈಷ್ಣವ ಸಂಪ್ರದಾಯದವರು ಮಾತ್ರ ಶೀವಳ್ಳಿಯಲ್ಲಿ ನೆಲೆ ಸಿದರು. ವೈಷ್ಣವಾಗ್ರೇಸರರಾದ ಶ್ರೀಮಧ್ವಾಚಾರ್ಯರೂ ಅವರ ಪೂರ್ವಪರಂಪರೆ ಯವರೂ ತಪಸ್ಸು ಮಾಡುತ್ತಿದ್ದ, ಪಾಠ ಹೇಳುತ್ತಿದ್ದ, ಕೊನೆಗೆ ಮಂಗಳ ಮಾಡಿ ಅರ್ಪಿಸುತ್ತಿದ್ದ, ಅನಂತೇಶ್ವರನು ನಾರಾಯಣನೆಂಬುದರಲ್ಲಿ ಸಂಶಯವಿರಲಾರದು. ಇನ್ನು ತಿರುಪತಿ ವೆಂಕಟರಮಣನನ್ನು ಕೆಲವು ಕಾಲ ಶೈವಸಂಪ್ರದಾಯ ಪ್ರಾಬಲ್ಯ ದಲ್ಲಿದ್ದಾಗ ಸುಬ್ರಹ್ಮಣ್ಯನೆಂದು ಶೈವರಾಕ್ರಮಿಸಿದ್ದರು. ತದನಂತರ ಶ್ರೀರಾಮಾನುಜಾ ಚಾರ್ಯರಿಂದ ಬಿಡುಗಡೆಯಾಯಿತು ಎಂಬ ಚರಿತ್ರೆಯು ಇದೆ. ಅದರಂತೆ ಉಡುಪಿ ಯಲ್ಲಿಯೂ ಶೈವರ ಪ್ರಾಬಲ್ಯವಿದ್ದಾಗ ಶಿವನೆಂದು ಬಲಾತ್ಕಾರ ನಡೆದಿರಬಹುದು. ಡಾ| ಸಾಲೆತ್ತೂರರು ಜೈನರ ಪ್ರಾಬಲ್ಯವಿದ್ದಾಗ ಚಂದ್ರನಾಥ, ಅನಂತನಾಥ ಎಂಬ ಬಸದಿಗಳಾಗಿದ್ದವು ಎಂಬುದಾಗಿ ಸಹ ಬರೆಯುತ್ತಾರೆ. ಆದರೆ ಅದೆಲ್ಲ ಸತ್ಯವೆಂದು ಶರ್ಮರು ಒಪ್ಪುತ್ತಾರೆಯೇ? ಅದರಂತೆನೇ ಶಿವಾಲಯವೆಂಬುದೂ ಅಷ್ಟೇ ಸತ್ಯ.

ವೈಷ್ಣವ ಕ್ಷೇತ್ರವೆಂಬುದೇ ಸರಿಕಾಣುತ್ತದೆ. ಚಂದ್ರಮೌಳೀಶ್ವರನಿಂದ ಶಿವನಹಳ್ಳಿಯೂ ಆಗಿಯದೆ. ಪ್ರಸಿದ್ಧ ಕ್ಷೇತ್ರವಾದ ಮೇಲೆ ಅನೇಕ ಪಂಥದವರ ಕಣ್ಣು ಇದೆ ಎಂದಾಯಿತು.

ಉಡುಪಿ ಶ್ರೀಮದನಂತೇಶ್ವರ ದೇವಸ್ಥಾನದಲ್ಲಿ ಅದರ ಉಪಾಸಕರಾದ ಶೀವಳ್ಳಿಯವರೇ ಕುಂಜಿತ್ತಾಯರ ಯಜಮಾನಿಕೆಯಿಂದ ಎಂದಿನಿಂದಲೂ ಪೂಜೆ, ಉತ್ಸವ ಮೊದಲಾದವುಗಳನ್ನು ಮಾಡುತ್ತಿದ್ದಾರೆ. ಸ್ಥಾನಿಕರು ಪೂಜೆ ಮಾಡುತ್ತಿದ್ದರು ಎಂಬುದಕ್ಕೆ ಯಾವ ದಾಖಲೆಯೂ ಇರುವುದಿಲ್ಲ. ಸ್ಥಾನಿಕರು ಅಂದಿನಿಂದ ಇಂದಿನ ವರೆಗೂ ಸದರಿ ದೇವಸ್ಥಾನದಲ್ಲಿ ದೇವಕಾರೀ ಕೆಲಸ ಮಾಡುತ್ತಿದ್ದಾರೆ. ಒಂದು ವೇಳೆ ಸ್ಥಾನಿಕರು ಪೂಜೆ ಮಾಡುತ್ತಾ ಇರುತ್ತಿದ್ದರೆ ಪೂಜೆ ಕಸಿದುಕೊಂಡ ಮೇಲೆ ಅವಮಾನಕರವಾದ ದೇವಕಾರಿ ಕೆಲಸವನ್ನು ಅದೇ ದೇವಸ್ಥಾನದಲ್ಲಿ ಇದೇ ಶೀವಳ್ಳಿಯವರ ಕೈಕೆಳಗೆ ಮಾಡುತ್ತಿರುವ ಸಂಭವವಿರುವುದಿಲ್ಲ. ಮತ್ತು ತುಳುವ ಸಪ್ತಕ್ಷೇತ್ರಗಳಲ್ಲಿ ಬ್ರಾಹ್ಮಣರ ಕೊರತೆಯನ್ನು ಮನವರಿಕೆ ಮಾಡಿ ಅದನ್ನು ನೀಗಿಸುವ ಸಲುವಾಗಿ ಬ್ರಾಹ್ಮಣರನ್ನು ಕರೆತರಿಸಿ ನಿಲ್ಲಿಸಿ ಪೂಜೆ ಮಾಡಿಸಿದ್ದು ಎಂಬ ವಿಷಯ ಗೋಕರ್ಣಾದಿಗಳಲ್ಲಿ ಒಪ್ಪಿಗೆ, ಅನಂತೇಶ್ವರದಲ್ಲಿ ಮಾತ್ರ ಅಲ್ಲವೆಂಬುದು ಹೇಗೆ ಸರಿ ಹೋಗುತ್ತದೆ? ಶಾಸನಗಳಲ್ಲಿ ಯಾವುದೋ ಸ್ಥಾನಿಕರಿಗೆ ಅಧಿಕಾರ ಸ್ಥಾನಮಾನ ಇರುವುದನ್ನು ಕಂಡು ಶಬ್ದಸಾಮ್ಯದಿಂದ ದೇವಕಾರೀ ಕೆಲಸದವರಿಗೂ ಉಂಟೆಂದು ಭ್ರಮಿಸಿ ಡಾ| ಸಾಲೆತ್ತೂರರು ಬರೆದರು. ಈ ದೇವಕಾರಿಗಳೂ ಅದನ್ನು ಈಗ ಮೆಲುಕುಹಾಕುತ್ತಿದ್ದಾರೆ. ಇಷ್ಟೆ ವಸ್ತುಸ್ಥಿತಿ ಎಂಬುದನ್ನು ಈ ಮೊದಲೇ ಹೇಳಿಯದೆ. ಮತ್ತು ದೇವಸ್ಥಾನದ ಆಸ್ತಿಗಳನ್ನು ಸಾಗುವಳಿ ಮಾಡುತ್ತಿದ್ದ ದೇವಕಾರಿಗಳು ಗೇಣಿಯನ್ನೂ ಕೊಡದೆ ದೇವಸ್ಥಾನದಲ್ಲಿ ಕೆಲಸವನ್ನೂ ಮಾಡದೆ ಆಸ್ತಿ ತಮ್ಮದೆಂದು ವಾದಮಾಡಲು ಹತ್ತಿದಾಗ ಊರವರ ಸಹಾಯದಿಂದ ಅಧಿಕಾರಿಗಳು ಆಸ್ತಿ ಕಸಿದುಕೊಂಡು ಹೊರಹಾಕಿದ್ದು ಇದೆ ಎಂಬುದನ್ನು ಈ ಹಿಂದೆಯೇ ಹೇಳಿದೆ. ಇಂಥಾ ಶರ್ಮರ ಮಾತುಗಳಿಗೆ ಹಿಂದೆ ಹೇಳಿದ್ದೆ ಉತ್ತರವೆಂದು ಭಾವಿಸಬೇಕು.

ಗೀತಾ 17ನೇ ಅಧ್ಯಾಯದಲ್ಲಿ ಪ್ರತಿ ಒಂದು ವಸ್ತುವನ್ನು ಸಾತ್ವಿಕ, ರಾಜಸ, ತಾಮಸವೆಂದು ವಿಭಾಗ ಮಾಡಿ ಸಾತ್ವಿಕ ಗ್ರಾಹ್ಯ ಇತರ ತ್ಯಾಜ್ಯವೆಂದು ಹೇಳಿಯದೆ. ಆದುದರಿಂದ ಪುರಾಣಗಳಲ್ಲಿಯೂ ಈ ತ್ರೈವಿಧ್ಯವು ಅಸಂಭವವಲ್ಲ, ಉಚಿತವೂ ಆಗಿದೆ. ಶರ್ಮರಿಗೆ ಮೆಚ್ಚುಗೆಯಾದ ದೇವೀಭಾಗವತದ ಆದಿಭಾಗದಲ್ಲಿ ಶಾಸ್ತ್ರ ಮತ್ತು ಪುರಾಣಗಳ ತ್ರೈವಿಧ್ಯವು ಉಕ್ತವಾದುದನ್ನು ಗಮನಿಸಬೇಕು. ಪದ್ಮಪುರಾಣದ ಉತ್ತರಖಂಡದಲ್ಲಿ ನಾಮನಿರ್ದೇಶಪೂರ್ವಕ ಸ್ಮೃತಿಪುರಾಣಗಳ ಸಾತ್ವಿಕ, ರಾಜಸ, ತಾಮಸ ವಿಭಾಗವು ಉಕ್ತವಾಗಿದೆ. ಸ್ಕಾಂದ, ಮಾತ್ಸ್ಯ, ಕೂರ್ಮ ಪುರಾಣಗಳಲ್ಲಿ ಲಕ್ಷಣಮೂಲಕವಾಗಿ ವೈಷ್ಣವ ಸಾತ್ವಿಕ, ಬ್ರಾಹ್ಮ ರಾಜಸ, ಶೈವ ತಾಮಸವೆಂದು ಹೇಳಿಯದೆ. "ಅಗ್ನೇಃ ಶಿವಸ್ಯ ಮಾಹಾತ್ಮ್ಯಂ ತಾಮಸೇಷು ಪ್ರಕೀರ್ತಿತಂ" ಎಂಬುದನ್ನು ಲಕ್ಷಿಸಬೇಕು.

ಆದುದರಿಂದ ಶರ್ಮರು ತಾಮಸಪುರಾಣದ ವಾಕ್ಯಗಳನ್ನು ಉದಾಹರಿಸಿ ಶುದ್ಧ ಸಾತ್ವಿಕ ವೈಷ್ಣವ ಧರ್ಮದ ಮೇಲೆ ನಿಂದೆ ವ್ಯಕ್ತಮಾಡುವುದು ಎಷ್ಟು ಮಾತ್ರಕ್ಕೂ ಉಚಿತವಲ್ಲ.

ಪುಟ 77ರಲ್ಲಿ ಉಡುಪಿಯಲ್ಲಿ ಗೋಕುಲಾಷ್ಟಮೀ ಎಂಬ ಶಿರೋಲೇಖನದ ಕೆಳಗೆ ಶೀವಳ್ಳಿಯವರು ಆಚರಿಸುವ ಗೋಕುಲಾಷ್ಟಮೀ ವ್ರತವನ್ನು ಆಕ್ಷೇಪಿಸಿ ತನ್ಮೂಲಕ ಶಿವಳ್ಳಿಯವರನ್ನು ತೆಗಳಲು ಹೊರಟಿದ್ದಾರೆ ಶರ್ಮರು. ಆದರೆ ಅದರ ಮರ್ಮವನ್ನು ತಿಳಿಯಲು ಪ್ರಯತ್ನ ಮಾಡಲಿಲ್ಲ. ಪಂಚಾಂಗದಲ್ಲಿ ಕೆಲವು ಸಾರಿ "ಸ್ಮಾರ್ತಾನಾಂ ಏಕಾದಶೀ" "ಭಾಗವತ ವೈಷ್ಣವಾನಾಮೇಕಾದಶೀ" ಹೀಗೆಲ್ಲಾ ಬರೆಯುತ್ತಾರೆ. ಆದರೆ ಅದನ್ನೂ ಕುರಿತು ಅಪಹಾಸ ಮಾಡಬೇಕಾಗಿತ್ತು. ಆದರೆ ಹಾಗೆ ಮಾಡಲಿಲ್ಲ. ಏಕೆಂದರೆ ತಮ್ಮ ಶಾಂಕರಶಿಷ್ಯರ ಪೈಕಿ ಸಹ ಭಾಗವತ ಸಂಪ್ರದಾಯದವರು ಸ್ಮಾರ್ತ ಏಕಾದಶಿ ಮಾಡುವುದಿಲ್ಲ. ಅದಕ್ಕೆ ಕಾರಣವಿರಬಹುದೆಂದು ಶರ್ಮರು ತಿಳಿದಿದ್ದರಾದೀತು. ವಿದ್ಧ ಏಕಾದಶಿ ತ್ಯಾಜ್ಯ, ಶುದ್ಧ ಏಕಾದಶಿ ಗ್ರಾಹ್ಯ ಎಂಬ ಸ್ಪಷ್ಟ ಪ್ರಮಾಣಾನುಸಾರವಾಗಿ ಭಾಗವತರು ಮರುದಿನ ಶುದ್ಧ ಏಕಾದಶೀವ್ರತ ಮಾಡುತ್ತಾರೆ. ಶಿವಳ್ಳಿಯವರು ಪಿತೃಪಕ್ಷದಲ್ಲಿ ಕೃಷ್ಣಾಷ್ಟಮೀ ವ್ರತ ಏಕೆ ಮಾಡುತ್ತಾರೆಂಬುದರ ಕಾರಣವನ್ನು ಶರ್ಮರು ಹುಡುಕುತ್ತಿದ್ದರೆ ಆಗ ಅವರಿಗೂ ಸಮಾಧಾನವಾಗುತ್ತಿತ್ತು. ಹಾಗೆ ಮಾಡದೆ ಇದ್ದುದು ಶಿವಳ್ಳಿಯವರ ತಪ್ಪೇ? "ಯಸ್ಮಿನ್ನಬ್ದೇ ಭಾದ್ರಪದೆ ಸ ಮಾಸೆ ಸಿಂಹಸ್ಥಯೋಃ ರವಿಗುರ್ವೋಃ ಪರೇಶಃ ಉದೈತ್" ಎಂಬುದಾಗಿ ಪ್ರಮಾಣವಾಕ್ಯದಿಂದ ತಿಳಿದುಬರುವ ಪ್ರಕಾರ ಸಿಂಹರಾಶಿಯಲ್ಲಿ ಸೂರ್ಯನಿರುವಾಗ ಅಂದರೆ ಸೌರ ಶ್ರಾವಣದಲ್ಲಿ ಗುರು ಸಿಂಹರಾಶಿಯಲ್ಲಿದ್ದಾಗ ಚಾಂದ್ರ ಭಾದ್ರಪದ ಮಾಸದಲ್ಲಿ ಶ್ರೀಕೃಷ್ಣಜನ್ಮ ಆಗಿಯದೆ. ಸ್ಪಷ್ಟ ಪಿತೃಪಕ್ಷದಲ್ಲಿಯೇ ಶ್ರೀಕೃಷ್ಣಾವತಾರವಾಗಿದೆ ಎಂಬುದು ಇದರಿಂದ ಸ್ಪಷ್ಟವಾಯಿತು. ಚಾಂದ್ರ ಭಾದ್ರಪದ ಸೌರ ಶ್ರಾವಣದಲ್ಲಿ ಶ್ರೀಕೃಷ್ಣಜನ್ಮಾಷ್ಟಮೀ ಎಂಬುದು ಇದರಿಂದ ಸಿದ್ಧವಾಯಿತು. ಈ ಯೋಗವು ಪ್ರತಿವರ್ಷ ಬರುವುದಿಲ್ಲ. 2 ವರ್ಷ ಬಿಟ್ಟು 3 ವರ್ಷಕ್ಕೊಂದುಸಾರಿ ಬರುತ್ತದೆ. ಉಳಿದ 2 ವರ್ಷಗಳಲ್ಲಿ ಚಾಂದ್ರ ಭಾದ್ರಪದ ಇಲ್ಲವಿದ್ದರೂ ಸೌರ ಶ್ರಾವಣವನ್ನೊಂದನ್ನು ಅನುಸರಿಸಿ ಮಾಡಬೇಕಾಗುತ್ತದೆ. ಅಂತೂ ಸೌರ ಶ್ರಾವಣ ಮಾಸ ಸರ್ವತ್ರ ಪ್ರತಿವರ್ಷ ಶೀವಳ್ಳಿಯವರ ಕೃಷ್ಣಾಷ್ಟಮೀವ್ರತ ಆಚರಣೆಯಲ್ಲಿ ತಪ್ಪುವುದಿಲ್ಲ. ಶರ್ಮರ ಹೇಳಿಕೆಯಂತೆ ಕೃಷ್ಣಾಷ್ಟಮಿ ವ್ರತಾಚರಣೆಯಾದರೆ 3 ವರ್ಷಕ್ಕೊಂದುಬಾರಿ ಸೌರ ಶ್ರಾವಣವೂ ಇಲ್ಲ, ಚಾಂದ್ರ ಭಾದ್ರಪದವೂ ಇಲ್ಲ. ಕೇವಲ ಚಾಂದ್ರ ಶ್ರಾವಣದಲ್ಲಿ ಮಾತ್ರ ಕೃಷ್ಣಾಷ್ಟಮೀವ್ರತ ಮಾಡಬೇಕಾಗುತ್ತದೆ. ಅವರಿಗೆ ಅದೇ ಮೆಚ್ಚಿದರೆ ಹಾಗೆಯೇ ಮಾಡಲಿ. "ಅಬದ್ಧಂ ಪರಿತ್ಯಾ ಕುಚೋದ್ಯಂ ಕರೋತಿ" ಎಂಬಂತೆ ಶರ್ಮರ ಪ್ರವೃತ್ತಿ ಆಗಿದೆ. ಶೀವಳ್ಳಿಯವರು ಮುಖ್ಯವಾದ ಯೋಗವನ್ನು ಅನುಸರಿಸುವಾಗ ಆ ಯೋಗವನ್ನೇ ಬಿಡಬೇಕಾಗಿ ಶರ್ಮರ ಉಪದೇಶವಾಗಿದೆ. ಇದೀಗ ಶಾಸ್ತ್ರವಿಧಿ ಬಿಟ್ಟವರು ಶರ್ಮರೋ? ಶೀವಳ್ಳಿಯವರೋ?

"ಶ್ರಾವಣ್ಯಾಂ ಪ್ರೌಷ್ಠಪದ್ಯಾಂ ವಾ ಪ್ಯುಪಾಕೃತ್ಯ ಯಥಾವಿಧಿ" ಎಂದು ಮನು
ಸ್ಮೃತಿವಾಕ್ಯದಲ್ಲಿ ಶ್ರಾವಣ ವ ಭಾದ್ರಪದ 2 ತಿಂಗಳು ಪಕ್ಷಭೇದೇನ ಉಪಾಕರ್ಮಕ್ಕೆ ಕಾಲ
ಉಕ್ತವಾಗಿದೆ. ಈ ಪಕ್ಷಭೇದ ಉಂಟಾಗಲು ಕಾರಣವೇನೆಂದು ಶರ್ಮರು ಗಮನಿಸಲಿಲ್ಲ.
ಚಾಂದ್ರ ಶ್ರಾವಣದಲ್ಲಿ ಸೂರ್ಯನು ಕರ್ಕಾಟಕ ರಾಶಿಯಲ್ಲಿದ್ದರೆ ಆಗ ಉಪಾಕರ್ಮ
ಆಗುವುದಿಲ್ಲ. ಅದಕ್ಕೆ ಭಾದ್ರಪದದಲ್ಲಿ ಮಾಡಬೇಕು ಎಂಬ ದ್ವಿತೀಯ ಪಕ್ಷ ಉಂಟಾ
ಯಿತು. ಶ್ರಾವಣ ಪೌರ್ಣಿಮಾ ಸಮಯಕ್ಕೆ ಸೂರ್ಯ ಸಿಂಹದಲ್ಲಿದ್ದರೆ ಆಗ ಚಾಂದ್ರ
ಮತ್ತು ಸೌರ ಶ್ರಾವಣ ಮಾಸದಲ್ಲಿಯೇ ಉಪಾಕರ್ಮ ಮಾಡತಕ್ಕದ್ದು. ಅಂದರೆ
ಮುಖ್ಯವಾಗಿ ಸಿಂಹಮಾಸದಲ್ಲಿಯೇ ಉಪಾಕರ್ಮವೆಂಬುದು ಧರ್ಮಶಾಸ್ತ್ರಕಾರರ
ತಾತ್ಪರ್ಯವೆಂದಾಯಿತು. ಈಗ ಶರ್ಮರು ಪು. 84ರಲ್ಲಿ ಏನೇನೋ ಬರೆಯುತ್ತಾರಲ್ಲಾ
ಅದಕ್ಕೆ ಅರ್ಥವೇನಿದೆ? ಧರ್ಮಶಾಸ್ತ್ರದ ಗಂಧಗಾಳಿ ಗೊತ್ತಿಲ್ಲದವರಿಗೆ ಈ ಹವ್ಯಾಸ
ಏಕೆ? "ಮೌನಮಪಂಡಿತಾನಾಂ" ಸುಮ್ಮನೆ ಬಾಯಿ ಮುಚ್ಚಿಕೊಂಡು ಕೂತಿದ್ದರೆ
ಗೌರವವಿರುತ್ತಿತ್ತು. ಶ್ರಾವಣ ಮಾಸವೊಂದೇ ಉಪಾಕರ್ಮ ಕಾಲವೆಂಬುದು ಶರ್ಮರ
ತಪ್ಪು ತಿಳುವಳಿಕೆ. ಇದರಂತೆನೇ ಮಕರ ಮಾಸದಲ್ಲಿ ಉತ್ಸರ್ಜನವಾಗಬೇಕೆಂಬ ಅಭಿ
ಪ್ರಾಯದಿಂದ ಪುಷ್ಯ ಪೌರ್ಣಿಮಾ ವ ಮಾಘ ಪೌರ್ಣಿಮಾ ಇವುಗಳೆರಡರ ಪೈಕಿ
ಒಂದರಲ್ಲಿ ಉತ್ಸರ್ಜನವೆಂದು ಸಹ ಹೇಳಿಯದೆ.

ಪುಟ 27ರಿಂದ 30ರ ವರೆಗೆ ಪುತ್ತಿಗೆ ಮಠದ ಅಕ್ಕಯ್ಯ ಸ್ವಾಮಿಗಳ ವ್ಯಾಜ್ಯದ
ಕುರಿತು ಬರೆದು ಕೊನೆಗೆ "ಈ ಮೇಲಿನ ಜಡ್ಜ್‌ಮೆಂಟಿನಿಂದ ತಾವು ಉತ್ತಮ ಬ್ರಾಹ್ಮಣ
ರೆಂದು ಹೇಳಿಕೊಳ್ಳುವ ಈ ಮಾಧ್ವ ಗುರುಗಳ ವರ್ತನೆಯು ಎಷ್ಟು ಹೇಯವಾದುದು"
ಎಂದು ಶರ್ಮರು ಬರೆಯುತ್ತಾರೆ. ಇಲ್ಲಿ ಶರ್ಮರ ಕುರಿತು ಒಂದು ಪ್ರಶ್ನೆ ಕೇಳಬೇಕಾ
ಗಿದೆ—ಪುತ್ತಿಗೆ ಮಠದ ಮೊದಲನೇ ಸುಮತೀಂದ್ರ ಸ್ವಾಮಿಗಳ ವರ್ತನೆ ಹೇಯ
ವಾದುದು ಎಂತ ಅಭಿಪ್ರಾಯವೋ? ಉಳಿದ 7 ಮಠಗಳ ವರ್ತನೆ ಹೇಯವಾದುದು
ಎಂತ ಅಭಿಪ್ರಾಯವೋ? ಮೊದಲನೆ ಅರ್ಥಸಮ್ಮತವಾದರೆ ಅದನ್ನು ಶರ್ಮರೊಬ್ಬರೇ
ಶೋಧಿಸಿ ಹೇಳಿದ್ದೆಂದೇನಾಗುವುದಿಲ್ಲ. ಇಡೀ ಶಿವಳ್ಳಿ ಸಮಾಜವೇ ಸುಮತೀಂದ್ರರ
ದುರಾಚಾರವನ್ನು ಪ್ರತಿಭಟಿಸಿ ಅವರು ನೇಮಿಸಿದ ವಿಜಯೀಂದ್ರರನ್ನು ಕಿತ್ತೊಗೆದು
ತಮ್ಮ ಪೀಠಗಳನ್ನೂ ತಮ್ಮ ಸಮಾಜವನ್ನೂ ಸಂರಕ್ಷಿಸಿ ತಮ್ಮ ಪಾವಿತ್ರ್ಯವನ್ನು
ಜಗತ್ತಿಗೆ ಶ್ರೇಷ್ಠವೆಂದೇ ಜಾಹೀರು ಮಾಡಿದೆ. ಮತ್ತೆ ಯಾವುದೇ ಪಕ್ಷಪಂಗಡಗಳಲ್ಲಿ
ಒಂದೊಂದು ವ್ಯಕ್ತಿಯು ದುಷ್ಟನಾಗಿ ಹುಟ್ಟುತ್ತಾನೆ. ಸಮುದ್ರಮಥನ ಕಾಲದಲ್ಲಿ ವಿಷ
ಸಹ ಹುಟ್ಟಲಿಲ್ಲವೇ? ಅಂಥವನನ್ನು ತಮ್ಮ ಪಕ್ಷಪಂಗಡದಿಂದ ಹೊರಗಿಡಿಸುವುದು
ವಿವೇಕಶಾಲಿ ಸಮಾಜದ ಕರ್ತವ್ಯವಾಗಿದೆ. ಅದರಂತೆ ಶಿವಳ್ಳಿ ಸಮಾಜವೂ, ಇತರ
ಗುರುಪೀಠಗಳೂ, ಸಕಾಲದಲ್ಲಿ ತಮ್ಮ ಪ್ರತಿಕ್ರಿಯಾ ವಕ್ತಪಡಿಸಿ, ದೋಷವನ್ನು ಹೊರ
ತೆಗೆದು ಪರಿಶುದ್ಧತೆಯನ್ನೂ, ವಿವೇಕ ಶೀಲತೆಯನ್ನೂ ವ್ಯಕ್ತ ಪಡಿಸಿಯದೆ. ಇತರ ಗುರು
ಪೀಠದವರು ದ್ವಂದ್ವಮಠವಾದ ಶ್ರೀಕೃಷ್ಣಾಪುರ ಮಠದವರಿಗೆ ಬೆಂಬಲಕೊಟ್ಟು ಅವರ

ಕಡೆಯಿಂದ ಪರಿಶುದ್ಧರಾದ ಶತಾಯುಷಿ ಶ್ರೀ ೧೧೦೮ ಸುಧೀಂದ್ರತೀರ್ಥರನ್ನು, ಪುತ್ತಿಗಾ ಮಠದ ಉತ್ತರಾಧಿಕಾರಿಯನ್ನಾಗಿ ನೇಮಿಸಿ ಧರ್ಮಪತಾಕೆಯನ್ನು ಮೇಲಕ್ಕೆ ಹಾರಿಸಿದರು. ಇಂಥಾ ಪ್ರಸಂಗದಲ್ಲಿ ಶರ್ಮರು ಶಿವಳ್ಳಿ ಸಮಾಜವನ್ನು, ಮಾಧ್ವ ಗುರುಪೀಠಗಳನ್ನು ಅಭಿನಂದನೆ ಮಾಡಬೇಕಾಗಿದ್ದಾಗ ಯಾವನೊಬ್ಬನನ್ನು ದುಷ್ಟನೆಂದು ಹೊರಹಾಕಲ್ಪಟ್ಟದೆಯೋ? ಅವನನ್ನು ದೃಷ್ಟಾಂತವಾಗಿರಿಸಿ ಎಲ್ಲಾ ಮಾಧ್ವ ಗುರುಪೀಠಗಳನ್ನೂ ನಿಂದಿಸುವ ಹೀನಮಟ್ಟಕ್ಕಿಳಿದದ್ದು ದುರ್ದೈವದ ಸಂಗತಿಯಾಗಿದೆ. 7 ಮಠದ ಗುರುಗಳ ವರ್ತನೆಯು ಹೇಯವಾದುದು ಎಂಬ 2ನೇ ಪಕ್ಷವನ್ನು ಶರ್ಮರು ಒಪ್ಪಿಕೊಳ್ಳುವುದಾದರೆ ಶರ್ಮರು ಸದಸದ್ವಿವೇಕ ಬುದ್ಧಿಯನ್ನು ದೂರವಿರಿಸಿದ್ದಾರೆ ಎಂದಿಷ್ಟೇ ಹೇಳತಕ್ಕದ್ದು. ವ್ಯಾಪಾರಿಯು ಬುಟ್ಟಿಯೊಳಗಿನ ಕೊಳೆತ ಒಂದೆರಡು ಹಣ್ಣುಗಳನ್ನು ಕಿತ್ತಿಸೆದನೆಂದರೆ, ಬುಟ್ಟಿಯೊಳಗೆ ಕೊಳೆತ ಹಣ್ಣುಗಳೇ ಇವೆಯೆಂದು ತಿಳಿದುಕೊಳ್ಳುವಂಥಾ ಬುದ್ಧಿವಂತ ಪಂಡಿತರಾಗಬಾರದು. ಇದರಂತೆ ಧರ್ಮಪೀಠಗಳಲ್ಲಿದ್ದು ಅವರ ಹೊಣೆಯನ್ನು ನಿರ್ವಹಿಸಲು ಅಸಮರ್ಥರೆಂದೆನಿಸಿದಾಗ ಆ ಜಾಗದಿಂದ ತಾನು ನಿವೃತ್ತನಾಗಿ ಉಳಿದ ಯೋಗ್ಯರಾರಿಗಾದರೂ ಅವಕಾಶಕಲ್ಪಿಸಿ ಕೊಡುವುದು ಸೂಕ್ತಕ್ರಮ. ಅದನ್ನು ಶರ್ಮರು ದೂಷಣಾರ್ಹ ಮಾಡುವುದು ಉಚಿತವಲ್ಲ. ಅಧಿಕಾರದಲ್ಲಿದ್ದವನು ಅಧಿಕಾರ ನಡೆಸಲಾರದವನಾದರೆ ರಾಜಿನಾಮೆ ಕೊಡುವುದು ಉಚಿತವಲ್ಲವೇ?

(ಶರ್ಮರು ಪು. 53—55ರಲ್ಲಿ) ಶೃಂಗೇರಿ ಮಠದ ಪ್ರಾಕ್ತನ ಲೇಖಮಾಲಾದೊಳಗಿನ 2 ಪತ್ರಗಳೆಂದು ಬರೆದು ತೋರಿಸಿ, ಶ್ರೀಪುತ್ತಿಗಾ ಮಠದ ಶ್ರೀಪಾದಂಗಳವರ ಮೇಲೆ ಬಲಾತ್ಕಾರದಿಂದ ಪರಕೀಯರ ಸೊತ್ತನ್ನು ಅಪಹರಿಸಿದ ಆರೋಪವನ್ನಿಟ್ಟದ್ದಾರೆ. ಆ ಎರಡು ಪತ್ರಗಳನ್ನು ಪರೀಕ್ಷಿಸಿದರೆ, ಅದು ಸಂಪೂರ್ಣ ಸುಳ್ಳೆಂದೂ, ಪತ್ಯುತ ಪುತ್ತಿಗಾ ಮಠದ ಶ್ರೀಪಾದಂಗಳವರು ಹೈಗ ಮಠ ಉಳಿಸುವ ಸ್ತುತ್ಯ ಕೆಲಸ ಮಾಡಿರುತ್ತಾರೆಂದೂ, ಹಾಗೆ ಪೂರ್ಣಯ್ಯನವರೇ ಅಭಿಪ್ರಾಯಪಟ್ಟದ್ದಾರೆ ಎಂದು ತಿಳಿಯಬಹುದಾಗಿದೆ. ತಾ. 27—7—1810ರಲ್ಲಿ ಪೂರ್ಣಯ್ಯನವರು ಕವಲೇದುರ್ಗದ ಅಮಿಲ ಶಂಕರಯ್ಯನವರಿಗೆ ಶೃಂಗೇರಿ ಮಠದಿಂದ ಬಂದಿರುವ ಫಿರ್ಯಾದಿ ಅರ್ಜಿಯನ್ನು ಬರೆದು ತಿಳಿಸಿ ಅದರ ಚವುಕಶಿ ಮಾಡಿ ತಿಳಿಸಲು ಬರೆದ ಅಜ್ಞಾಪತ್ರ ಒಂದು, ಮತ್ತು ಅದೇ ದಿವಸ ಶೃಂಗೇರಿ ಮಠಕ್ಕೆ ಪತ್ರ ಮುಟ್ಟಿದ ಬಗ್ಗೆ, ಆ ಪತ್ರದ ಕುರಿತು ತನ್ನಲ್ಲಿ ಉಂಟಾದ ವಾಸ್ತವಿಕ ಅಭಿಪ್ರಾಯವನ್ನೂ ಬರೆದಿರುವ ಎರಡನೇ ಪತ್ರವೊಂದು ಹೀಗೆ ಎರಡು ಆ ಪತ್ರಗಳು ಇವೆ. ಫಿರ್ಯಾದಿ ಏನಂದರೆ "ತೀರ್ಥಹಳ್ಳಿಯಲ್ಲಿ ಹೈಗ ಮಠದ ಮೊದಲು ಯತೀಶ್ವರರು ಮುಕ್ತರಾಗಿ ಅವರ ಶಿಷ್ಯರು ಚಿಕ್ಕವರಿರುವರು. ಅಲ್ಲಿರುವ ಒಂದೆರಡು ಜನರು ಪುತ್ತಿಗೆ ಮಠಕ್ಕೆ ಹೋಗಿ ತೀರ್ಥಹಳ್ಳಿ ಮಠದ ಶಾನುಭಾಗನ ಮೇಲೆ ಇಲ್ಲದ ಕ್ಷಿಪ್ರಗಳನ್ನು ಹೇಳಿದ್ದರಿಂದ ಪುತ್ತಿಗೆ ಮಠದ ಶ್ರೀಗಳವರು ರಾತ್ರಿಕಾಲದಲ್ಲಿ ತೀರ್ಥಹಳ್ಳಿ ಮಠದ ಯತೀಶ್ವರರ ಕರೆಸಿಕೊಂಡು ಈ ಮಠದ ಶಾನುಭಾಗನ ಲೆಕ್ಕಪತ್ರಗಳನ್ನೆಲ್ಲಾ ತರಿಸಿಕೊಂಡು ಶಾನುಭಾಗನ ಕೊಲ್ಲಬಾರದ ಕೊಲೆ ಕೊಂದು, ಅವನ ಬದುಕು ಸಹಾ

ಹಾಕಿಕೊಂಡರು" ಎಂದಾಗಿದೆ. ಫಿರ್ಯಾದಿ ಮಾಡಿದವರು, ಶಾನುಭಾಗನ ಹೆಂಡತಿ ಮಕ್ಕಳು. ಶೃಂಗೇರಿ ಮಠದ ಶ್ರೀಗಳವರಲ್ಲಿ ಫಿರ್ಯಾದಿ ಅರಿಕೆ ಮಾಡಿಕೊಳ್ಳಲಾಗಿತ್ತು. ಮಠದಅಧಿಕಾರಿಗಳು ಫಿರ್ಯಾದಿಯನ್ನು ಪರಾಮರ್ಶಿಸದೆ ಮೇಲೆ ಹುಜೂರರಕಡೆ ಬರೆದು ಕಳುಹಿಸಿದರು. ಪೂರ್ಣಯ್ಯನವರು ಸದ್ರಿ ಫಿರ್ಯಾದಿ ವಾಕ್ಯವನ್ನು ಪರಾಮರ್ಶಿಸಿ, ಶೃಂಗೇರಿ ಮಠಕ್ಕೆ ಬರೆದ ಉತ್ತರದಲ್ಲಿ "ಹೈಗ ಮಠದ ಯತೀಶ್ವರರು ಅಲ್ಲೇ (ಪುತ್ತಿಗೆ ಮಠದಲ್ಲಿ) ಶಾನುಭಾಗನ ಸಹ ಕರೆಸಿ, ಜಾಸ್ತಿ ಅಮಲು ಮಾಡಲು ನಿಮಿತ್ತವೇನು?" ಎಂಬ ಸೂಚಕ ಪ್ರಶ್ನೆ ಹಾಕಿ "ಹಾಗೆ ನಡೆದಿರದಿದ್ದಾಗ್ಯೂ ಆ ಬಗ್ಗೆ ಕವಲೇದುರ್ಗದ ಅಮಿಲ ಶಂಕರಯ್ಯನವರಿಗೆ ರವಾನೆ ಕಳಿಸಿದೆ" ಎಂದೂ "ಆ ಮಠದ ಯತೀಶ್ವರರು (ಪುತ್ತಿಗೆಯವರು) ಲೆಕ್ಕಪತ್ರ, ಬದುಕು, ಏನಿದ್ದಾಗ್ಯೂ ಹಿಂದಕ್ಕೆ ಕಳುಹಿಸಿಕೊಟ್ಟದ್ದಾಗಿ ತಿಳಿದಿರುವುದು" ಎಂದು ಸಹ ಬರೆದು ತಿಳಿಸಿರುತ್ತಾರೆ. "ಕೊಲ್ಲಬಾರದ ಕೊಲೆ ಕೊಂದು" ಎಂಬ ಫಿರ್ಯಾದಿ ವಾಕ್ಯಕ್ಕೆ "ಬಡಿದು" ಎಂಬ ಅರ್ಥಮಾಡಿದ್ದಾರೆ. ಮತ್ತು ಫಿರ್ಯಾದಿಯಲ್ಲಿ ಆರಂಭದ ಮಾತಿನಿಂದಲೂ ಈ ಪತ್ರಗಳಿಂದ ತಿಳಿಯಬಹುದಾದ ವಿಷಯಗಳೇನೆಂದರೆ ತೀರ್ಥಹಳ್ಳಿಯ ರಾಮಚಂದ್ರಾಪುರ ಮಠವೆಂಬ ಹೈಗ ಮಠದ ಹಿರೇ ಶ್ರೀಗಳವರು ಕಾಲವಾದ ನಂತರ ಚಿಕ್ಕ ಸ್ವಾಮಿಗಳು ಮೈನರು ಇದ್ದು ಮಾಹಿತಿ ಇಲ್ಲದವರೆಂದು ಶಾನುಭಾಗನು ಮಠದ ಸೊತ್ತನ್ನು ಎತ್ತಿಹಾಕಲು ಪ್ರಾರಂಭಿಸಿದನು. ಅದನ್ನರಿತು ಮಠದ ಇತರ ನೌಕರರು ಚಿಕ್ಕ ಸ್ವಾಮಿಗಳ ಕೂಡ ವಿಚಾರಿಸಿ, ಪುತ್ತಿಗೆ ಶ್ರೀಗಳವರಲ್ಲಿ ವಿಜ್ಞಾಪಿಸಿಕೊಂಡರು. ಹೈಗ ಶ್ರೀಗಳವರನ್ನು ಪುತ್ತಿಗೆ ಮಠದ ಶ್ರೀಗಳವರು ಬರ ಹೇಳಿದರು. ಹಗಲು ಹೊತ್ತು ಶಾನುಭಾಗನು ತಡೆದಾನೆಂದು ರಾತ್ರೆ ಹೊತ್ತು ಅವನು ಮನೆಗೆ ಹೋದಾಗ ಹೈಗ ಶ್ರೀಗಳು ಪುತ್ತಿಗೆ ಮಠಕ್ಕೆ ಹೋದರು. ಆಗಲೇ ಶಾನುಭಾಗನನ್ನು ಕರೆಸಿ ವಿಚಾರಿಸಲಾಗಿ ಆತನು ಉಡಾಪಿತನದಿಂದ ಸತ್ಯಸ್ಥಿತಿ ತಿಳಿಸಲಿಲ್ಲ. ಜಬರದಸ್ತಿಯಿಂದ ಮಠದ ಲೆಖ್ಖಪತ್ರ ಬದುಕುಗಳನ್ನು ತರಿಸಬೇಕಾಯಿತು. ಮತ್ತು ಸರಕಾರದವರಿಗೆ ಮಠದ ಸೊತ್ತುಗಳನ್ನು ಒಪ್ಪಿಸುವ ತನಕ ತಮ್ಮಲ್ಲಿ ಶ್ರೀಗಳವರನ್ನು ಮತ್ತು ಮಠದ ವಸ್ತುಗಳನ್ನು ಇಟ್ಟುಕೊಂಡು ಕಾಪಾಡುತ್ತಿದ್ದರು. ಅಮಿಲ ಶಂಕರಯ್ಯರು ಬಂದಾಗ ಅವನ್ನೆಲ್ಲಾ ಒಪ್ಪಿಸಿ ಮಠ ಉಳಿಸುವ ಕೆಲಸ ಮಾಡಿದ್ದಕ್ಕೆ ಶರ್ಮರು ಅಭಿನಂದನೆ ಮಾಡಬೇಕಾಗಿದ್ದಾಗ ದೂಷಣೆ ಮಾಡಲೆತ್ನಿಸಿದ್ದಾರೆ.

ಪುಟ 90-98ರಲ್ಲಿ ಶರ್ಮರು ಹರಿದ್ವಾರದಲ್ಲಿ ನಡೆದ ದ್ವೈತಾದ್ವೈತ ಸಭೆಯ ಕುರಿತು ಪ್ರಸ್ತಾಪಿಸಿ ಭಂಡಾರಿಕೇರಿ ಶ್ರೀಪಾದಂಗಳವರನ್ನು ಪರಾಜಿತರೆಂದು ಅಪಹಾಸ ಮಾಡಲು ಹವಣಿಸಿದ್ದಾರೆ. ಶ್ರೀಭಂಡಾರಿಕೇರಿ ಶ್ರೀಪಾದಂಗಳವರು ಪರಾಜಿತರಾಗಲಿಲ್ಲ; ಪರಾಜಯ ಹೊಂದಲು ಶಕ್ಯವಿಲ್ಲ. ಅವರ ಮೇಲೆ ಹೊರಿಸಿದ ಅಪಸಿದ್ಧಾಂತವೆಂಬ ನಿಗ್ರಹಸ್ಥಾನ ದೋಷವು ಅಪಸಿದ್ಧಾಂತವಾಗಿರಲಿಲ್ಲ. ಮತ್ತೇನೆಂದರೆ ತಪ್ಪು ಇಲ್ಲದವನ ಮೇಲೆ ತಪ್ಪು ಹೊರಿಸಿದ್ದರಿಂದ "ನಿರನುಯೋಜ್ಯಾನುಯೋಗ" ಎಂಬ ನಿಗ್ರಹಸ್ಥಾನವು ಕರಪತ್ರಜೀಯವರ ಮೇಲೆ ಬಂದು ಅವರೇ ಪರಾಜಿತರಾಗಬೇಕಾಗುತ್ತದೆ. ಅಪಸಿದ್ಧಾಂತ

ವೆಂದರೆ ತಮ್ಮ ಪೂರ್ವಾಚಾರ್ಯರ ಮಾತಿಗೆ ವಿರುದ್ಧವಾಗಿ ಮಾತಾಡೋಣವು. ಗೀತಾ 13ನೇ ಅಧ್ಯಾಯದ 34ನೇ ಶ್ಲೋಕದ "ಭೂತ ಪ್ರಕೃತಿ ಮೋಕ್ಷಂ ಚ" ಎಂಬ ಪದಕ್ಕೆ ಭೂತಾನಾಂ=ಜೀವಾನಾಂ ಪ್ರಕೃತೇಃ=ಜಡಪ್ರಕೃತೇಃ ಮೋಕ್ಷಂ ಎಂದರೆ ಜೀವರಿಗೆ ಜಡಪ್ರಕೃತಿ ಕಡೆಯಿಂದ ಬಿಡುಗಡೆ ಎಂಬ ಅರ್ಥವನ್ನು ಶ್ರೀಭಂಡಾರಿಕೆರೆಯವರು ಮೊದಲನೇ ದಿವಸದ ವಾಕ್ಯಾರ್ಥದಲ್ಲಿ ಹೇಳಿರುವರು. ಗೀತೆಯ ಮೇಲೆ ಶ್ರೀಮಧ್ವಾಚಾರ್ಯರ ವ್ಯಾಖ್ಯಾನ, ಒಂದು ಭಾಷ್ಯ. ಮತ್ತೊಂದು ತಾತ್ಪರ್ಯ, ಹೀಗೆ 2 ಇದೆ. ಮೊದಲನೇ ಭಾಷ್ಯದಲ್ಲಿ ಭೂತೇಭ್ಯಃ ಪ್ರಕೃತೇಶ್ಚ ಮೋಕ್ಷಂ = ಮೋಕ್ಷಸಾಧನಂ=ಅಮಾನಿತ್ವಾದಿಕಂ ಎಂಬುದಾಗಿ ವಿವರಿಸಿಯದೆ. ಎರಡನೇ ತಾತ್ಪರ್ಯದಲ್ಲಿ "ಭೂತಾನಾಂ ಪ್ರಕೃತೇಃ ಮೋಕ್ಷಂ" ಎಂಬ ವ್ಯಾಖ್ಯಾನವಿದೆ. ಭಂಡಾರಿಕೆರೆಯವರು 2ನೇ ವ್ಯಾಖ್ಯಾನವನ್ನು ಹೇಳಿರುವರು. ಕರಪತ್ರಜೀಯವರು ಮತ್ತು ಅವರ ಸಂಗಡಿಗರು ಗೀತೆಯ ಮೇಲೆ ಶ್ರೀ ಮಧ್ವರ 2 ಗ್ರಂಥವಿದೆಯೆಂಬುದನ್ನರಿಯರು. ಗೀತೆಯ ಭಾಷ್ಯವೊಂದನ್ನೆ ತಿಳಿದಿದ್ದಾರೆ. ಕಾರಣ ಮೊದಲನೇ ದಿವಸದಲ್ಲಿ ವಿಚಾರ ಮಾಡಿದ ಅನೇಕ ಶ್ರುತಿಸ್ಮೃತಿ ವಾಕ್ಯಗಳನ್ನು ಬಿಟ್ಟು"ಭೂತಪ್ರಕೃತಿ ಮೋಕ್ಷ" ಪದಕ್ಕೆ ಗೀತಾತಾತ್ಪರ್ಯಾನುಸಾರಿಯಾದ ಶ್ರೀಮಧ್ವರಿಗೆ ಸಮ್ಮತವಾದ ಶ್ರೀಭಂಡಾರಿಕೆರೆ ಶ್ರೀಗಳ ವಾಕ್ಯಾರ್ಥವನ್ನು ಗೀತಾತಾತ್ಪರ್ಯವನ್ನರಿಯದೆ, ತಿಳಿಸಿ ಹೇಳಿದರೂ ಕೇಳದೆ ಭಾಷ್ಯದಲ್ಲಿ ಹೇಳಲಿಲ್ಲವೆಂಬ ಕಾರಣ ಮುಂದುಮಾಡಿ ಮಧ್ಯಸ್ಥರು ಮೊದಲಾಗಿ ಸಕಲರೂ ಕೂಗಾಟ ನಡೆಯಿಸಿದರು. ಇದನ್ನು ಗಮನಿಸಿದರೆ ಅಲ್ಲಿ ಸೇರಿದ ಈ ಅದ್ವೈತಪಂಡಿತರೆಂಬವರನ್ನು ಪಂಡಿತರೆನ್ನಬೇಕೋ ಹೇಗೆ ಎಂಬುದನ್ನು ಓದುಗರೇ ನಿರ್ಧರಿಸಬೇಕು. ಮೊದಲನೇ ದಿವಸದ ವಾಕ್ಯಾರ್ಥ ಮುಗಿದ ಮೇಲೆ ಆ ದಿವಸದ ವಾಖ್ಯಾರ್ಥದ ಪರಿಣಾಮದಿಂದ ಮರುದಿನದ ಸಭೆಯಲ್ಲಿ ಸಹ ತಮ್ಮ ಪಕ್ಷಕ್ಕೆ ಜಯಸಿಗಲಾರದೆಂದು ನಿಶ್ಚಯಿಸಿ ಗೀತೆಯ ಭೂತಪ್ರಕೃತಿ ಮೋಕ್ಷಪದದ ತಾತ್ಪರ್ಯಾನುಸಾರಿ ವ್ಯಾಖ್ಯಾನಕ್ಕೆ ಭಾಷ್ಯದ ಸುಳ್ಳುವಿರೋಧವನ್ನು ತೋರಿಸಿ ಅಪಸಿದ್ಧಾಂತ ಮುಂದುಮಾಡಿ ಪರಾಜಯ ಘೋಷಣೆ ಮಾಡಬೇಕೆಂದು ಗೊತ್ತುಮಾಡಿದಂತೆ ಮರುದಿವಸ ಸಭೆಗೆ ಬಂದೊಡನೆಯೇ ಬೇರೆ ಯಾವ ವಾಕ್ಯಾರ್ಥ ವ ವಿಚಾರ ಒಂದೂ ಮಾಡದೆ ಅಪಸಿದ್ಧಾಂತವನ್ನೇ ವಿವರಿಸಿದರು. ಮಧ್ಯಸ್ಥರಾದರೂ ಪ್ರ. ವಾದಿಯನ್ನು ಇದಕ್ಕೆ ನಿಮ್ಮ ಉತ್ತರವೇನೆಂದು ಕೇಳಬೇಕಾಗಿತ್ತು. ಹಾಗೆ ಕೇಳಲೂ ಸಹ ಇಲ್ಲ. ಪ್ರ. ವಾದಿಯ ಹೇಳಿಕೆಯನ್ನು ಕಿವಿಮೇಲೆ ಹಾಕಿಕೊಳ್ಳಲಿಲ್ಲ. ಇದು ತಾತ್ಪರ್ಯದಲ್ಲಿ ಮಧ್ವಾಚಾರ್ಯರ ವ್ಯಾಖ್ಯಾನವೇ ಆಗಿದೆ. ಅಪಸಿದ್ಧಾಂತವಲ್ಲವೆಂತ ಹೇಳಿ ಪುಸ್ತಕ ತೋರಿಸಿದರೂ ಪರಾಜಯ ಘೋಷಣೆ ಮಾಡಿಯೇ ಮಾಡಿ ಬಿಟ್ಟರು. ಹೀಗೆ ನಡೆದಿತ್ತು ಹರಿದ್ವಾರದ ದ್ವೈತಾದ್ವೈತ ವಾಕ್ಯಾರ್ಥ ಸರಣಿ. ಕರಪತ್ರಜೀಯವರಂಥಾ ದೊಡ್ಡ ಮನುಷ್ಯರು ಇಷ್ಟು ಕ್ಷುಲ್ಲಕ ಮಾರ್ಗಕ್ಕೆ ಇಳಿಯುತ್ತಾರೆಂಬುದನ್ನು ಶ್ರೀಭಂಡಾರಿಕೆರೆಯವರ ಸಾತ್ವಿಕ ಮನಸ್ಸು ಅರಿಯಲಿಲ್ಲ. ಕರಪತ್ರಜೀಯವರು ತಮ್ಮ ಕುಟಿಲನೀತಿಯನ್ನು ರಾಜಕಾರಣದಲ್ಲಿ ತೋರಿಸಿದಂತೆಯೇ ತತ್ವಜ್ಞಾನ ಮಾರ್ಗದಲ್ಲಿ ಸಹ ಉಪಯೋಗಿಸಿ

ವಿಜಯಿಗಳಾದ ಶ್ರೀಭಂಡಾರಿಕೆರೆ ಶ್ರೀಪಾದಂಗಳವರ ಮೇಲೆ ಪರಾಜಯ ಹೊರಿಸಿ ಪ್ರಚಾರ ಮಾಡಿದರು. ಮಧ್ಯಸ್ಥ ಸ್ಥಾನವನ್ನು ಅಂಗೀಕರಿಸಿದ ಭಾಗವತಾನಂದರು ವಾದಿಯಾದ ಕರಪತ್ರಜೀಯವರ ಪಕ್ಷಪಾತಿ ಇದ್ದರೆಂದು ಹರಿದ್ವಾರದಿಂದ ಹೊರಡುವ "ಸಾಪ್ತಾಹಿಕ ಕೀರ್ತಿ" ಎಂಬ ಪತ್ರಿಕೆಯಲ್ಲಿ 1965 ಜುಲೈ ತಿಂಗಳ 3ನೇ ಅಂಕದಲ್ಲಿ ಪ್ರಕಟಿಸಲ್ಪಟ್ಟಿದೆ. ಮತ್ತು ಈ ಸಭೆಯಲ್ಲಿ ನಡೆದ ಸಕಲ ವೃತ್ತಾಂತಗಳನ್ನೂ, ಕುಟಿಲ ಕಾರಸ್ಥಾನಗಳನ್ನೂ, ಬರೆದಿದೆ. ದಕ್ಷಿಣ ದೇಶದ ಪಂಡಿತರು, ಪೀಠಾಧಿಪತಿಗಳು, ಕರಪತ್ರ ಜೀಯವರ ಅಪಸಿದ್ಧಾಂತದ ಆರೋಪವನ್ನು ನಿರಾಕರಿಸಿರುವರು. ಸ್ವತಹ ಶ್ರೀಕೂಡಲೀ ಶೃಂಗೇರಿ ಶ್ರೀಮಜ್ಜಗದ್ಗುರು ಶ್ರೀಸಚ್ಚಿದಾನಂದ ಶಂಕರಭಾರತೀ ಶ್ರೀಗಳವರು ಕುಂಜಾರು ವಿಠಲೋಪಾಧ್ಯಾಯರಿಗೆ ಬರೆದ ರಾಯಸದಲ್ಲಿ ಶ್ರೀಭಂಡಾರಿಕೆರೆ ಶ್ರೀಗಳವರು ಮಾಡಿದ ವ್ಯಾಖ್ಯಾನದಿಂದ ಅಪಸಿದ್ಧಾಂತ ದೋಷ ಬರಲಾರದು ಎಂದು ಸಮೂದಿಸಿದ್ದಾರೆ. ಅದರಂತೆ ಕಾಂಚೀ ಕಾಮಕೋಟಿ ಪೀಠಾಧೀಶ್ವರ ಚಂದ್ರಶೇಖರ ಸರಸ್ವತೀ ಸ್ವಾಮಿ ಯವರು ಸಹ ಶ್ರೀಭಂಡಾರಿಕೆರೆಯವರನ್ನು ಕರಪತ್ರಜೀಯವರು ಅಪಸಿದ್ಧಾಂತ ದೋಷದ ಮೂಲಕ ಪರಾಜಿತರಾದರೆಂದು ಪ್ರಚಾರಪಡಿಸುವುದು ಸರಿಯಾಗುವುದಿಲ್ಲ. ಮಾಧ್ವ ಗ್ರಂಥಗಳಲ್ಲಿ ಭಂಡಾರಿಕೆರೆಯವರು ಹೇಳಿದ ವ್ಯಾಖ್ಯಾನವೂ ಬರೆದದ್ದು ಇದೆ. ಆದುದ ರಿಂದ ಪೂರ್ವಾಚಾರ್ಯರ ವಿರುದ್ಧ ಭಾಷಣ ಹೇಗಾಗಬಹುದು? ಎಂಬುದಾಗಿ ಹೇಳಿರು ವರು. ಅಂತೂ ಉತ್ತರದೇಶದ ಪಂಡಿತರೆಂಬವರ ಕಪಟ ವ್ಯೂಹದಲ್ಲಿ ಪ್ರವೇಶ ಮಾಡಿದ ತಪ್ಪಿಗಾಗಿ ಶ್ರೀಭಂಡಾರಿಕೆರೆ ಶ್ರೀಗಳವರಿಗೆ ಶರ್ಮರಂಥವರ ಕಡೆಯಿಂದ ಸಲ್ಲದ ಶಬ್ದ ಗಳನ್ನು ಕೇಳುವ ಪ್ರಸಂಗ ಉಂಟಾಯಿತು. ಶ್ರೀಕರಪತ್ರಜೀಯವರು ಮತ್ತು ಅವರ ಸಂಗಡಿಗರು ಮಾಡಿದ ಪಾಂಡಿತ್ಯದ ಅಪಚಾರದಿಂದ ದಕ್ಷಿಣ ದೇಶದ ಪೀಠಾಧಿಪತಿಗಳಿಗೆ ಮತ್ತು ಪಂಡಿತರಿಗೆ ಮುಖವೆತ್ತದಂತಾಗಿ ತಮ್ಮ ಪ್ರತಿಕ್ರಿಯೆಗಳನ್ನು ಪ್ರಕಟಣೆ ಮೂಲಕ ವ್ಯಕ್ತಪಡಿಸಿದ್ದಾರೆ. ಆ ಪ್ರಕಟಣೆ ರಾಯಸಗಳು ಮುಂದೆ ಕೊಡಲಾಗುತ್ತದೆ.

ಶರ್ಮರು ಮಾಧ್ವರನ್ನು ನಿಂದಿಸಲು ಉಪಯೋಗಿಸಿದ ಇನ್ನೊಂದು ಸಾಧನ ವೆಂದರೆ ಅಂಕುರಾಜ ಸುಬ್ರಾಯಶರ್ಮ ಎಂಬ ಆಂಧ್ರದೇಶದ ಒಬ್ಬ ಹಿಂದೂ ಮಿಶ ನರಿಯು, ಆತನು ಡಿಸ್ಟ್ರಿಕ್ಟ್ ಮೇನ್ಯುವೇಲಿನಲ್ಲಿ ಬರೆದ ಶಿವಳ್ಳಿಯವರ ನಿಂದೆಗಳನ್ನು ಅವನಿಗೆ ಇರುತ್ತಿರುವ ಇಂಗ್ಲಿಷ್ ಭಾಷೆಯ ಪರಿಚಯದಿಂದ ತಿಳಕೊಂಡು ಆತನ ಸ್ವಭಾವಕ್ಕನುಸರಿಸಿ ಬೈಯಲು ಪ್ರಾರಂಭಿಸಿದ್ದನು. ಇದು ಜನತೆ ಒಗ್ಗದೆ ಪ್ರತಿಕ್ರಿಯೆ ಉತ್ಪನ್ನವಾಯಿತು. ಸನ್ 1932ರ ಶುಮಾರು ಇಂಗ್ಲಿಷರ ನಸಿಬ್ ತೀರಹತ್ತಿದ್ದರಿಂದ ಅವರ ಅವನತಿಯ ಮೊಳಕೆ ಒಡೆಯಲು ಪ್ರಾರಂಭವಾಗಿತ್ತು. ಇಂಗ್ಲಿಷರು ಇಲ್ಲಿ ಬಂದು ಭಾರತಭೂಮಿಯಲ್ಲಿದ್ದು ಮಾಡಿದ ಮಹಾಕಾರ್ಯವೆಂದರೆ ಭಾರತೀಯ ಸಂಸ್ಕೃತಿಯ ಸಮೂಲ ನಾಶವೆಂಬುದನ್ನು ಆರಂಭದಲ್ಲಿಯೇ ತಿಳಿಸಲಾಗಿದೆ. ಸಂಸ್ಕೃ ತಿಯ ರಕ್ಷಕರಾಗಿದ್ದ ಬ್ರಾಹ್ಮಣರನ್ನು ಸಂಸ್ಕೃತಿ ಬೋಧಿಸುವ ಶಾಸ್ತ್ರವನ್ನು ತೆಗಳಲು ಮತ್ತು ಅದರಲ್ಲಿ ತಾತ್ಸಾರಬುದ್ಧಿ ಹುಟ್ಟಿಸಲು ಬೇಕಾದಂತೆ ಏನೆಲ್ಲಾ ಮಾಡಬೇಕೋ

ಅದನ್ನೆಲ್ಲಾ ಮಾಡಿ ಬರೆದು ಕಲಿಸಿ ಹಣ ಕೊಟ್ಟು ಪ್ರಚಾರಪಡಿಸಲು ಇಂಗ್ಲೀಷರು ಅಧಿಕಾರಯುಕ್ತರಾಗಿಯೂ ಇದ್ದುದರಿಂದ ಇದು ಸಫಲತೆಯನ್ನು ಹೊಂದಿದೆ. ಆದುದರಿಂದ 1932ರಲ್ಲಿ ಸ್ಟರಕ್ಕರವರು ಹಿಂದೆಯೇ ಬರೆದಿಟ್ಟ ಡಿಸ್ಟ್ರಿಕ್ಟ್ ಮೇನ್ಯುವೇಲಿನ ಪ್ರಚಾರ ಮಾಡಲು ಸುಬ್ರಾಯ ಶರ್ಮರಿಗೆ ಪ್ರತಿಬಂಧಕ ಎನಿಸ್ದೀತು? ಇಲ್ಲಿಯ ಜರ್ಮನ್ ಮಿಶನರಿಯುವರ ಸಹಕಾರ ಸಹ ಸಾಕಷ್ಟು ಸಿಕ್ಕುವಾಗ ಶರ್ಮರ ಶಿವಳ್ಳಿ ಬ್ರಾಮ್ಹಣರ ದ್ರೋಹವು ಯಶಸ್ವಿಯಾಗದೆ ಇರಲು ಕಾರಣವೇನಿದೆ? ಬ್ರಮ್ಹದ್ವೇಷ ಮೂಲಕ ಶರ್ಮರಿಗೆ ಅಂಕುರಾಜರ ಪ್ರವೃತ್ತಿ ಉಚಿತವೆನಿಸಿದರೂ ಸತ್ಯವೆಂದು ಎನಿಸಲಾರದು.

ಪುಟ 30ರಲ್ಲಿ "ಡಿಸ್ಟ್ರಿಕ್ಟ್ ಮೇನ್ಯುವೇಲಿನ ಆಧಾರದಿಂದ ಶಿವಳ್ಳಿ ಬ್ರಾಮ್ಹಣರು ಮೊಗವೀರರಾಗಿದ್ದರು ಎಂತ ಪ್ರಚಾರ ಮಾಡುತ್ತಿದ್ದನು" ಎಂದು ಶರ್ಮರು ಬರೆಯುತ್ತಾರೆ. ಇದನ್ನು ಶರ್ಮರು ಸತ್ಯವೆಂದು ಒಪ್ಪುತ್ತಾರೋ? ಸ್ಟರಕ್ ದೊರೆ ಒಂದು, ಅಂಕುರಾಜ ಸುಬ್ರಾಯರು ಎರಡು. ಅಚ್ಯುತ ಶರ್ಮರು ಮೂರು ಈ ಜನರು ಶಿವಳ್ಳಿಯವರನ್ನು ನಿಂದಿಸುವ ಒಂದೇ ಕಾರ್ಯದಲ್ಲಿ ಪ್ರವೃತ್ತರಾದುದರಿಂದ ಅಚ್ಯುತ ಶರ್ಮರಿಗೆ ಮತ್ತಿಬ್ಬರಲ್ಲಿ ತಾತ್ಕಾಲಿಕ ವೈಶ್ರ್ಯ ವ್ಯಕ್ತವಾದರೂ ಅದೇ ಡಿಸ್ಟ್ರಿಕ್ಟ್ ಮೇನ್ಯುವೇಲಿನ ಬರಹಗಳನ್ನು ಎತ್ತಿ ಸ್ಥಾನಿಕರನ್ನು ತೆಗಳಲು, ಅಪಪ್ರಚಾರ, ಮಾಡಲು, ಪ್ರಾರಂಭ ಮಾಡಿದರೆ ಆಗ ಶರ್ಮರು ಅದು ಸರಿ ಎಂದು ಒಪ್ಪುತ್ತಾರೆಯೋ? ಗುರುರಾಜ ಭಟ್ಟರು "ದಕ್ಷಿಣ ಕನ್ನಡ ಜಿಲ್ಲೆಯ ಸ್ಟರಕ್‌ರವರು ಸಂಗ್ರಹಿಸಿದ ಮೇನ್ಯುವೇಲಿನಲ್ಲಿ ಉಲ್ಲಿಖಿತವಾದ (ಸ್ಥಾನಿಕರ) ವಿಷಯಗಳು ಅಯೋಗ್ಯವಾದುದು" ಎಂದು ಬರೆದುದನ್ನು ಮೊದಲು ಒಂದು ಸಾರಿ ಬರೆಯಲಾಗಿದೆ. :ಅಂದರೆ ಮೇನ್ಯುವೇಲಿನಲ್ಲಿ ಶಿವಳ್ಳಿಯವರನ್ನಷ್ಟೇ ತೆಗಳಲಿಲ್ಲ—ಸ್ಥಾನಿಕರನ್ನೂ ತೆಗಳಿಯದೆ. ಭಾರತೀಯರನ್ನು ನಿಂದಿಸುವ ವಿಷಯದಲ್ಲಿ ಪಾಶ್ಚಾತ್ಯರು ಯಾವ ತರದ ಕೊರತೆಯನ್ನೂ ಯಾವ ಪಕ್ಷಪಂಗಡದ ಮೇಲೆಯೂ ತೋರಗೊಡಲಿಲ್ಲ. ಕೆಲವೊಂದು ಯುರೋಪ ಜನರ ಕೆಲಸವೇ ಅದಾಗಿತ್ತು ಎಂದರೆ ಅದು ಅತಿಶಯೋಕ್ತಿ ಎಂದೆನಿಸಲಾರದು. ಮತ್ತು ಶರ್ಮರು ಡಿಸ್ಟ್ರಿಕ್ಟ್ ಮೇನ್ಯುವೇಲಿನಲ್ಲಿ ಬರೆದದ್ದನ್ನು ಸಂಪೂರ್ಣ ಸತ್ಯವೆಂದು ಒಪ್ಪುತ್ತಾರೋ? ಹಾಗೆ ಒಪ್ಪಿದರೆ ತಮ್ಮ ಅಂದರೆ ಸ್ಥಾನಿಕರ ಸ್ವರೂಪ ಏನು ಉಳಿಯುವುದು? ಸುಳ್ಳು ಎಂದು ಒಪ್ಪಿದರೆ ಶಿವಳ್ಳಿಯವರಿಗೆ ಏನು ಬಾಧಕವಾಗುತ್ತದೆ?

ಪುಟ 31ರಲ್ಲಿ ಶರ್ಮರು "ಮಾಧ್ವರಿಗೆ ಸಂಧ್ಯಾವಂದನೆ ಇಲ್ಲ. ಸಂಧ್ಯಾವಂದನೆ ಎಂದರೆ ಏನು ಎಂಬುದು ಮಠದ ಸ್ವಾಮಿಗಳಿಗೆ ಗೊತ್ತಿಲ್ಲ. ಸಂಧ್ಯಾವಂದನೆ ಮಾಡದೆ ಇರುವವರು ಬ್ರಾಮ್ಹಣರಾಗಿರಲೂ ಸಾಧ್ಯವಿಲ್ಲವೆಂದು ತೀರ್ಪು ಎಂದು ಬರೆದು ತೋರಿಸಿ ಮಾಧ್ವ ಶಿವಳ್ಳಿಯವರಿಗೆ ಸಂಧ್ಯಾವಂದನೆ ಇಲ್ಲವೆನ್ನಲು ಹೊರಟಿದ್ದಾರೆ." ಹಗಲು ಹೊತ್ತು ಮಧ್ಯಾಹ್ನದಲ್ಲಿ ಈಗ ನಡುರಾತ್ರೆ ಎಂದಂತೆ ಈ ಹಠಮಾರಿತನಕ್ಕೆ ಮದ್ದೇ ಇರುವುದಿಲ್ಲ. ನಿದ್ದೆ ಬಂದವನನ್ನು ಎಬ್ಬಿಸಬಹುದು. ನಿದ್ದೆಯ ಸೋಗು ಮಾಡುವವ

ನನ್ನು ಎಬ್ಬಿಸುವುದು ಕಷ್ಟಸಾಧ್ಯ. ಅಚ್ಯುತ ಶರ್ಮರಿಗೆ ಒಂದು ವೇಳೆ ಆಗಿರಲಿಕ್ಕಿಲ್ಲ. ಆದರೆ ಅಚ್ಯುತ ಶರ್ಮರ ತಂದೆಯವರಿಗೆ ಮತ್ತು ಅಜ್ಜನವರಿಗೆ ಶಿವಳ್ಳಿಯವರಿಂದಲೇ ಉಪನಯನ, ವಿವಾಹಾದಿ ಸಂಸ್ಕಾರಗಳು ಮಾಡಿಸಿದ್ದಾಗಿದೆ. ಸಂಧ್ಯಾವಂದನೆ ಇಲ್ಲದವರಿಂದ ಉಪನಯನ ಮಾಡಿಸಿಕೊಂಡರೆಂದೆನ್ನಬೇಕೇ?

ಸ್ಥಾನಿಕಾಶ್ಶೈವಭಕ್ತಾಶ್ಚ ವೈದ್ಯಾ ಡಮರುಧಾರಿಣಃ |
ವೇಶ್ಯಾ ಮಾಲಾಗೃಹಿಣ್ಯಶ್ಚ ಚತ್ವಾರೋ ದೇವ ಸೇವಕಾಃ ||
ಶಿವನಿರ್ಮಾಲ್ಯ ಭೋಕ್ತೃತ್ವಾತ್ ತಸ್ಮಾತ್ ವೈದಿಕಜಾತಯಃ |
ಅಪಾಂಕ್ತೇಯಾ ಇತಿ ಜ್ಞಾತ್ವಾ ಪೃಥಕ್ ಕುರ್ವಂತಿ ಸ್ಥಾನಿಕಾನ್ ||
ವೇದೋಕ್ತ ವಿಧಿನಾ ತಾನ್ ಹಿ ಸಂಸ್ಕುರ್ವಂತಿ ದ್ವಿಜಾತಯಃ |
ಪಿತ್ರಂ ದೈವಂ ಕರ್ಮಮಾತ್ರಂ ಪ್ರಾಯಶ್ಚಿತ್ತಂತು ತದ್ಗೃಹೇ ||
ಕಾರಯಂತಿ ಚ ವಿಪ್ರಾಶ್ಚ ಸ್ವಯಂಪಾಕೇನ ಶ್ರೋತ್ರಿಯಾಃ |
ವೈದಿಕಾದಿತರೆ ಕಾರ್ಯೇ ತೇಷಾಂ ಭೇದೋ ನ ವಿದ್ಯತೇ ||
ಬ್ರಹ್ಮವೀರ್ಯ ಬಲಾತ್ತೇಷು ವಿಪ್ರತ್ವಂ ಪ್ರತಿಪದ್ಯತೇ ||
ಆಹಾರ ಧಾನ್ಯ ಗ್ರಹಣೇ ತನ್ಮೂಲಂ ನ ವಿಚಿಂತ್ಯತೇ ||
ಆಚಾರವಿಧಿ ಬಾಹ್ಯತ್ವಾತ್ ತಥಾ ಸ್ಥಾನಿಕ ಜಾತಿನಾಂ |
ಸಪಂಕ್ತಿತ್ವಂ ಚ ಬಂಧುತ್ವಂ ವೈದಿಕೇಷು ನ ವಿದ್ಯತೇ ||

ಎಂಬ 350 ವರ್ಷ ಪ್ರಾಚೀನವಾದ ವಿಶ್ವದರ್ಶನದ ಶ್ಲೋಕಗಳಲ್ಲಿ ಸ್ಥಾನಿಕರಿಗೆ ಬ್ರಾಹ್ಮಣರ ಕಡೆಯಿಂದ ಉಪನಯನಾದಿ ಷೋಡಶಕರ್ಮಗಳು ಆಗುವುದು ಎಂತ ಸ್ಪಷ್ಟವಿದೆ. ಈ ಸುಮಾರು 50 ವರ್ಷಗಳಿಂದ ಬಿಟ್ಟರೇನಾಯಿತು? ಮೊದಲು ಮಾಡಿಸಿಕೊಂಡದ್ದು ಇಲ್ಲವೆಂತ ಆಗಲು ಸಾಧ್ಯವುಂಟೇ? ಆದುದರಿಂದ ಮರದ ಮೇಲೆ ಕೂತುಕೊಂಡು ಬುಡಕಡಿಯುವಂಥಾ ಮನುಷ್ಯನ ಬುದ್ಧಿವಂತಿಕೆ ಶರ್ಮರು ನಡೆಯಿಸಿದ್ದಾರೆ.

ಈಗ ಸತ್ಯಾಪಲಾಪ ಮಾಡಿದರೇನಾಯಿತು? ದಾಖಲೆಗಳು, ಪ್ರಮಾಣಗಳು, ಮುಚ್ಚಿಡಲು ಬರುವಂತಿದೆಯೇ? ಶರ್ಮರಂಥವರು ಶಿವಳ್ಳಿಯವರನ್ನು ನಿಂದಿಸುವ, ಹೀನಾಯಿಸುವ, ಪ್ರಯತ್ನ ಏನು ಮಾಡುತ್ತಾರೆಯೋ? ಅದು ತಮ್ಮ ಮೂಲವನ್ನೇ ಕೆಡಿಸಿಕೊಳ್ಳುವ ಪ್ರವೃತ್ತಿಯಾಗಿದೆ. ಈಗಿನ ಹೊಸ ಜನರಿಗೆ ಹಿಂದಿನ ಚರಿತ್ರೆಗಳು ತಿಳಿದಿರುವುದಿಲ್ಲ. ಆದುದರಿಂದ ಹೊಸದನ್ನೇನಾದರೂ ಕಲ್ಪಿಸಿ ಮೋಸ ಮಾಡುವುದು ಎಂಬ ಯೋಚನೆ ಮಾಡಿರುವುದು ಆತ್ಮಘಾತುಕ ಘೋರಣೆಯಾಗಿರುತ್ತದೆ. ಏಕೆಂದರೆ ಹಳೇ ಜನರೂ ಅಲ್ಲಲ್ಲಿ ಒಬ್ಬೊಬ್ಬರು ಇರುತ್ತಾರೆ. ಹಳೇ ಕಾಲದ ದಾಖಲೆಗಳೂ ಇರುತ್ತವೆ. ಅದನ್ನೆಲ್ಲಾ ಸಂಶೋಧನೆ ಮಾಡುವವರೂ ಇರುತ್ತಾರೆ. ಮೊದಲು ಹೇಳಿದ 53ನೇ ಶ್ಲೋಕದಲ್ಲಿ ಸ್ಥಾನಿಕರು, ಪದಾರ್ಥಿಗಳು, ವೇಶ್ಯೆಯರು, ಮಾಲೆಯವರು ಹೀಗೆ 4 ತರದ ಜನರು ದೇವಸ್ಥಾನದಲ್ಲಿ ದೇವರ ಸೇವಕರು ಎಂದು ಸ್ಪಷ್ಟವಾಗಿ ಹೇಳಿಯದೆ. ಇದರಿಂದ

ಸ್ಥಾನಿಕರ ಸ್ಥಾನ ಮಾನವೇನು? ಎಂಬುದು ಚೆನ್ನಾಗಿ ತಿಳಿಯಬಹುದಾಗಿದೆ. ಸ್ಥಾನಿಕರು ದೇವಸೇವಕರು, ಅಧಿಕಾರಿಗಳಲ್ಲ, ಶಿವ ನಿರ್ಮಾಲ್ಯಭೋಜನ ಮೊದಲಾದ ಅವೈದಿಕ ಆಚಾರಭೇದಗಳಿಂದ ಬ್ರಾಮ್ಹಣರು ಸ್ಥಾನಿಕರನ್ನು ಅಪಾಂಕ್ತೇಯರೆನ್ನುತ್ತಾರೆ, ಬೇರೆ ಇಡುತ್ತಾರೆ. ಸ್ಥಾನಿಕರ ಮನೆಯಲ್ಲಿ ಬ್ರಾಮ್ಹಣರು ವೈದಿಕ ಪದ್ಧತಿಯಂತೆ ಪ್ರಾಯಶ್ಚಿತ್ತ ಪೂರ್ವಕವಾಗಿ ಹವ್ಯಕವ್ಯಗಳನ್ನು ಮಾಡಿಸುತ್ತಾರೆ. ಸ್ಥಾನಿಕರ ಮನೆಯಲ್ಲಿ ತಮ್ಮ ಪಾಕದಿಂದ ತಾವು ಊಟಮಾಡುತ್ತಾರಲ್ಲದೆ ಶಿವಳ್ಳಿಯವರು ಸ್ಥಾನಿಕರ ಅಡಿಗೆ ಊಟ ಮಾಡುವುದಿಲ್ಲ. ವೈದಿಕಾಚಾರ ವಿಧಿಗಳು ನಿಷಿದ್ಧವಾದುದರಿಂದ ಸಹಪಂಕ್ತಿಯೂ, ಸಹವಿವಾಹವೂ, ಸ್ಥಾನಿಕರ ಕೂಡಾ ಬ್ರಾಹ್ಮಣರಿಗೆ ಇರುವುದಿಲ್ಲ. ಹೀಗೆ ಹಿಂದಿನ ಶ್ಲೋಕಗಳ ಅರ್ಥವಿರುವುದು. ಓ ಶರ್ಮರೇ! ನೀವು ಹಳೆಯ ರಾಡಿಯನ್ನು ಕೆಣಕ ಬೇಡಿರಿ. ಅದರಿಂದ ದುರ್ವಾಸನೆಯೇ ಹೊರಡುತ್ತದೆಯಲ್ಲದೆ ಒಳ್ಳೇದು ಆಗಲಿಕ್ಕಿಲ್ಲ. ಮೊದಲು ಬ್ರಾಮ್ಹಣರ ಕೂಡ ಸಹಕರಿಸಿಕೊಂಡು ಇರುತ್ತಿದ್ದಾಗ ಏನು ಕಡಿಮೆಯಾ ಗಿತ್ತು? ಮತ್ತು ಈಗ ಜಗಳಾಡಿದಾಗ ಏನು ಹೆಚ್ಚಿನ ಗಳಿಕೆಯಾಯಿತು. ಕೇವಲ ಮನಸ್ಸಿನಲ್ಲಿದ್ದ ನೆಮ್ಮದಿಯೊಂದು ಕಳೆದುಹೋಯಿತು. ಒಳ್ಳೆ ನಡತೆ, ಸದಾಚಾರ, ಇವುಗಳಿಂದ ಮೇಲ್ಮೆಯಾಗುತ್ತದೆ. ರಾಗದ್ವೇಷದಿಂದ ಕೀಳುತನವಾಗುತ್ತದೆ. ರಾಗದ್ವೇಷ ಗಳೇ ಮನುಷ್ಯನ ಶತ್ರುಗಳು.

"ಯಸ್ತ್ವದ್ವೈತ ಮತೇ ಸ್ಥಿತ್ವಾ ಭಾರತೀ ಮತ ನಿಂದಕಃ |
ರೌರವಂ ನರಕಂ ಯಾತಿ ಯಾವಚ್ಚಂದ್ರದಿವಾಕರಂ ||"

ಎಂಬ ಆನಂದಗಿರಿಕೃತ ಶಂಕರವಿಜಯದ ಶ್ಲೋಕದಲ್ಲಿ ಅದ್ವೈತ ಮತದಲ್ಲಿರುತ್ತಿದ್ದವನು ಭಾರತೀ ಸಂಪ್ರದಾಯವನ್ನು ನಿಂದಿಸಿದರೆ ಆತನು ಸೂರ್ಯಚಂದ್ರರು ಇರುವ ವರೆಗೆ ರೌರವನರಕ ತಪ್ಪಿದ್ದಲ್ಲವೆಂದು ಶಪಿಸುವ ಉಪಕ್ರಮವು ಕಾಣುತ್ತದೆ. ಶರ್ಮರು ಪೂರ್ವೋಕ್ತ ಶ್ಲೋಕದ ಹಿನ್ನೆಲೆಯನ್ನು ವಿಮರ್ಶಿಸಲಿಲ್ಲ. ಶ್ರೀಶಂಕರಾಚಾರ್ಯರಿಗೂ ಸುರೇಶ್ವರಾಚಾರ್ಯರಿಗೂ ನಡೆದ ವಾದದಲ್ಲಿ ಸುರೇಶ್ವರರ ಪತ್ನಿಯಾದ ಸರಸವಾಣಿ ಯವರೇ ಮಧ್ಯಸ್ಥಪದವಿಯನ್ನು ವಹಿಸಿದ್ದರು. ವಾದಾವಸಾನದಲ್ಲಿ ಮಹಾನಸವೆಂದರೆ ಅಡಿಗೆ ಮನೆಯಿಂದ ಬಂದು ಪತಿಯನ್ನು ಪರಾಜಿತರನ್ನಾಗಿ ಘೋಷಣೆ ಮಾಡಿದರು. ಮೊದಲು ಮಾಡಿಕೊಂಡ ಶರ್ತಪ್ರಕಾರ ಸೋತವನು ಗೆದ್ದವನ ಆಶ್ರಮ ಸ್ವೀಕಾರ ಮಾಡ ತಕ್ಕದು ಎಂಬಂತೆ ಸುರೇಶ್ವರರು ಸನ್ಯಾಸ ಸ್ವೀಕಾರ ಮಾಡಿ ಉತ್ತರದಿಕ್ಕಿಗೆ ಹೊರಟು ಹೋದರು. ಸರಸವಾಣಿಯವರು ಪತಿಯ ಸನ್ಯಾಸಗ್ರಹಣದಿಂದ ಭೂಮಿಯಲ್ಲಿದ್ದರೆ ವೈಧವ್ಯ ತಪ್ಪಿದ್ದಲ್ಲವೆಂದು ವೈಧವ್ಯಭಯದಿಂದ ಸ್ವರ್ಲೋಕಕ್ಕೆ ಹೋಗುವ ತಯಾರಿ ಯಲ್ಲಿದ್ದಾಗ "ವನದುರ್ಗಾಮಂತ್ರೇಣ ತಾಮಾಬಧ್ಯ ಆಕಾಶಮಾರ್ಗೇಣ ನೀತ್ವಾ ತುಂಗಾ ತೀರೆ ಶ್ರೀಚಕ್ರೇ ಸ್ಥಾಪಯಾ ಮಾಸ" ಅಂದರೆ ಶಂಕರಾಚಾರ್ಯರು ದುರ್ಗಾ ಮಂತ್ರದಿಂದ ಅವರನ್ನು ಬಂಧಿಸಿ ಶೃಂಗೇರಿಗೆ ಕರಕೊಂಡು ಹೋಗಿ ಕೂಡಿಸಿದರು. ಈ

ಓಸ್ನೆಲೆಯಲ್ಲಿ ಪೂರ್ವೋಕ್ತ ಶ್ಲೋಕ ಉಕ್ತವಾಗಿದೆ. ಶರ್ಮರು ಉಡುಪಿ ಶಿವಳ್ಳಿ ಮಾಧ್ವ ಪೀಠಗಳ ಮೇಲೆ ತನ್ನ ಮರ್ಜಿಪ್ರಕಾರ ಬಾಯಿ ಹರಿಬಿಟ್ಟಂತೆಯೇ ಆಗಿನ ಕಾಲದ ಕೆಲ ಕುತ್ಸಿತ ಜನರು ಮಹಾತ್ಮರ ಮೇಲೆ ಏನಾದರೂ ಸಲ್ಲದ ಆರೋಪ ಮಾಡಿರಬಹುದು. ಅದನ್ನು ಶರ್ಮರು ಸತ್ಯವೆಂದು ಒಪ್ಪುವುದಾದರೆ “ತನ್ನ ಎಲೆ ಮೇಲೆ ಕತ್ತೆ ಸತ್ತು ಬಿದ್ದಾಗ ಮಂದಿ ಎಲೆ ಮೇಲಿನ ನೊಣ ಝಾಡಿಸಿದನು” ಎಂಬಂತೆ ಶರ್ಮರ ಪ್ರವೃತ್ತಿ ಆದೀತಲ್ಲವೇ? ಸುಳ್ಳೆಂದಾದರೆ ಶರ್ಮರ ಮಾತೂ ಅಷ್ಟೇ? ದುರ್ಜನರ ದೌರ್ಜನ್ಯಕ್ಕೆ ಪ್ರಾಮಾಣಿಕತೆಯ ನೆಲೆಯೆಲ್ಲಿರುವುದು? ಆದುದರಿಂದ ಮಾಧ್ವಪೀಠಗಳ ಮೇಲೆ ಶರ್ಮರು ತನ್ನ ಆಕ್ರೋಶವನ್ನಷ್ಟೆ ವ್ಯಕ್ತಪಡಿಸಿದ್ದಾರೆನ್ನಬಹುದು.

ಶರ್ಮರ ಇನ್ನೆಷ್ಟೋ ಮಾತುಗಳಿಗೆ ಮೊದಲೇ ಬರೆದ ಸಂಗತಿಗಳಿಂದ ಉತ್ತರ ವಾಗುತ್ತದೆ. ಮಾತು ಬೆಳೆಸುವುದರಿಂದ ಪ್ರಯೋಜನವಿಲ್ಲ ಎಂತ ಇಲ್ಲಿಗೆ ಮುಗಿಸುತ್ತೇನೆ.

---

## SUBORDINATE COURT SOUTH KANARA

19th January 1887

### JUDGEMENT

In Appeal Suit at 248 of 1881.

Present K. R. Krishna Menon.

Subraya Hebbara, Plaintiff — Appellant

*Verses*

1. Vidya Poorna Tirtha Swami
2. Ramakrishna Asranna
3. Narasimha Asranna

} 1st to 3rd Defts. Respts.

Original suit was brought to establish plaintiffs right to the Local trusteeship of Subbramannya Devaswam to re-instate him in the enjoyment of the rights and preveleges thereof from the 1st to 3rd Defts. wrongfully and meleciously removed him on 15th Vaishakha Shudda of corresponding with the 27th April to restrain the Defts from interfering with his performing the duties of the local trustee as per particulars discribed in plaint schedule A and also to recover from the Rs. 654-7-10 being the damages sustained by him as per schedule B 2. The plaint recited that plaintiff is a local trustee of the Subhramannya Devaswam by right of inheritance and one of the 4 eminent Brahamin called Hebbara, that as such local trustee he is entitled to certain special honors in the pagoda, that 2 of the 4 Hebbara families respectively having became extinct, the plaintiff and Ubbani Subraya Hebbara who represent the remaining 2 families respectively

are entitled to the emolument alloted to Hebbaras and to their powers and receive honors in rotation that 1st to 3rd Defendants are trustees appointed by Government with the consent of the Hebbaras that 4 and 5 Defendants are members of the religious committee to whose jurisdiction the pagoda is subject that 1st to 3rd Defendants wrongfully prevented the plaintiff and the other Hebbara from exercising their office and dismissed them there from on the date above mentioned that they had no power to dismiss them that the 4 and 5 Defendants have connived at the wrongful acts of the other Defts. and that all of them are therefore liable to pay plaintiff the loss he has sustained.

3. 1st Dependant stated that the plaintiff is not a trustee of the Devaswam that he was only a Devakari servent of the pagoda from which he was dismissed for misconduct that his alleged claim to the trusteeship is barred by the law of limitations and that the plaintiff is not entitled to any damages.

4. 2nd and 3rd Defts stated that the Plaintiff is a mere Stanika and not a Bhramin by caste that he has no right whatever to the trusteeship and that his alleged claim is barred by the law of limitations.

5. The name of the 4th and 5th Defts were struck out of the list of the Defendants at the plaintiffs request.

6. The District Munciff of Putur (Mr. J. Lobo) dismissed the suit.

7. Plaintiff appeals.

8. There is not the slightest ground for this appeal. The plaintiff's documentary evidence has no bearing upon the question of trusteeship. The exhibit A simply shows that the duties of one Hebbara might be performed during his absence by another Hebbara. The exhibit B to J are produced to show that the plaintiff's cast is reckoned as a class of Brahmin. Whether it is so or not has however nothing to do with the question here at issue. If the question required determination the exhibits B to J are certainly insufficient to prove that Staniks are Bramins. The judgement B was reversed by the appeal Judgement C in so far as it related to the question of caste and the falsety of the deposition D was also established by the judgement C. There are no particulars in E. The exhibits F & G were issued by a Shishya of the 1st Defendant who had no authority to issue them. He was a mere deciple and until attaining the Swamiship he had no power to issue Rayaswams and to make rules and even these documents sufficiently show that Stanikas are not Bhramins and that the title of Shiva Brahmana is a new assumption. These as well as the exhibits H & J relate to the shaving of the widows of the Stanika caste. This shaving does not however necessarily import that the women shaved belongs to class of Brahmins. Women of carpenters and goldsmiths caste also get themselves Shaved after the deaths of their husbands and they have not yet laid any claim to the priestly order. The documents are therefore quite insufficient for the purposes for which they were produced & I cannot therefore endorse the Munsiffs

observation that the plaintiff's class are acknowledged to be the Bramins. The Defts have distinctly denied it and the book or treatise on caste supports the plaintiffs pretensions. The Stanikas are only a class of Levites a Pagoda's servent. The plaintiff himself admitted in his diposition that the duties of his caste are to collect flowers to provide lamps with wisks to sweep and cowdung the inner part of the pagoda to clean the mantapam to arrange for the Shantikas to hold torches to........vessels to light lamps to take firewood........the Kitchen to ring bells and the like. These certainly not the duties of a Brahmin. The oral evidence has been correctly disbeleived by the Munsiff A mere reading of the depositions of the witnesses is sufficient to show the utter worthlessness of their evidence, One witness had the audacity to say that the deity of the Temple and plaintiff has a common ancester. The Plaintiff has utterly failed to prove his alleged trusteeship and the exhibit I shows that the pretensions of his family to it had been long ago set at rest and that consequently his alleged claim is barred by the statute of Limitations. I confirm the original decree and dismiss this appeal with costs payable with interest at the rate of 6 per cent per annum from this date till payment.

Judgement pronounced on the 14th...........1881.

*(Sd.)*..................

Subordinate Judge·

(True copy)

## IN THE SUBORDINATE COURT OF SOUTH KANARA

Saturday, the 14th day of March 1891.

Present: S. Subbaiyar Esquire,

Miscellaneous petition No. 440 of 1890.

Bagalody Ramakrishnayya — Petitioner.

*Versus*

Vyasa Tirtha Swami — Counter Petitioner.

This is an application by the Petitioner, who was 14th Deft in Suit No. 27 of 1886 on the file of this Court, for sanction to prosecute the counter petitioner criminally for offences punishable under Sections 193, 196, 199, 209, 465 and 471 of the Indian Penal Code.

The petition is opposed:

The counter petitioner is one of the moktessars or trustees of the famous Subramanyam temple in this District. He was dismissed by the temple committee (defts 1 to 3) on the 21st April 1886, and brought suit No. 27/1886 to cancel the order of dismissal and establish his hereditary trusteeship of the temple.

In the course of the suit, counter petitioner filed a copper Sasanam which purported to be a grant of the year 1272 by King Ballala Raya, of the Subramanyam Temple in favour of the Samputa Narasimha Devaru of the counter petitioner's matt.

This Sasanam was found to be a forgery by this Court, which was of opinion that it was probably

got up after the institution of the suit and dismissed counter petitioner's suit. In appeal suit No. 31 of 1888, the High Court concurred with this court in regarding the Sasanam as a recent forgery and the evidence furnished by it as "questionable", but restored the counter petitioner to his office as one of the mottessars though it did not establish his title to hereditary moktesarship.

As the Chief ground for regarding the Sasanam to be a forgery and rejecting the counter petitioner's claim to the hereditary right claimed by him (the counter petitioner) their Lordships of the High Court stated there is not a single document prior to the "Claint is there any allusion to the alleged grant or the hereditary right of management." The ground for disbelieving the Plaint averments and the evidence of the counter petitioner were stated as follows:—

"In his deposition as defence 1st witness plff. (now counter petitioner) stated that he first learnt that the Ballala Raya had made over the management to one of his predecessors in 1884 or 1885, when his Shanbhogue read over to him a copy of an Urzi or petition which one of his predecessors Vidyaraja Tirtha presented to the collector in 1849." That copy he failed to file with the plaint and on his applying to the collector for a copy of the original petition, he was informed that no such Urzi appears to have been presented. It may be that plaintiff's predecessors presented a petition to the collector asking him to reconsider his order, but it is highly improbable that in that petition he set forth his hereditary right.

The counter petitioner has now caused the production of a number of papers from the records of the Collector, among which there is an original petition presented by the counter petitioner's predecessor and dated 1st November 1849 with other petitions of 1852-1853 and 1859 which bear the initials of the then Collector's Messrs. T. L. Blane and F. N. Maltby, I see no reason to doubt the genuineness of these petitions and papers. In the petition of 1st November 1849 the counter petitioner's predecessor did set forth his hereditary right in the way stated by the counter petitioner in his plaint.

Whatever might have been the opinion of the High Court if these papers had been before their Lordships, it is clear that the plaint allegations were not invented by the counter petitioner, and his evidence and account as to his Shrnbhogue's reading of a petition or Urzi to the Collector are not untrue. There were admittedly long standing disputes and claims to the hereditary management by counter petitioner's predecessor, and it is possible that the Sasanam was in existence from before 1884 or so, when counter petitioner assumed office, I do not think that sufficient grounds exist for saying that the counter petitioner got up the Sasanams or made wilful false statements in his plaint or evidence without a belief that they are true.

I am also of opinion that the 4th Deft, who is a brother-in-law of one of the members of the temple Committee and into whose hands the management of the rich temple is entrusted, is actuated neither

by disinterested motives nor by the pure desire of seeing the channels of public justice impolluted, in applying for this sanction. The High Court do not approve of the appointment or the 4th Deft. (petitioner) or of the conduct of the temple committee, as is clear from the remarks in the concluding para of their judgement,

It is obvious that the object of the petitioner is to satisfy his private grudge and get rid of the Counter Petitioner whom the High Court have reinstated in the trusteeship of which he was deprived by the Temple Committee on several unfounded charges and to obtain the exclusive and uncontrolled management of the rich temple and its immense properties by removing the counter petitioner out of the way...........hardly be right and proper in every case of the failure of parties to a Civil Suit, partly or wholly to make out his respective claims to grant sanction to prosecute one or the other or both criminally and in the present case I do not see grounds for Sanctioning the prosecution of the counter petitioner or to accord such sanction to the Petitioners, who is the most undeserving person to be armed with such a powerful instrument for oppressing and wreaking his private vengeance against his opponent.

The application is dismissed but without costs.

*(Sd.)*................ *(Sd.)*..............

**Superintendent.** **Sub Judge.**

**(True Copy)**

# ತಪ್ಪೊಪ್ಪುಗಳು

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 1 | 11 | ಅಂದರೆ | |
| 4 | 8 | ವೆಂದು | ವೆಂಬ |
| ,, | 9 | ಟ್ಟವೆ | ಟ್ಟಡೆ |
| ,, | 20 | ದಲ್ಲಿದ್ದ | ದಲ್ಲಿಲ್ಲದ |
| ,, | 29 | ವೆಂದು | ನೆಂದು |
| 10 | 13 | ಹೇಮಮಾಲಿನಿ | ಹೇಮಮಾಲಿ |
| 11 | 3 | ಸ್ವಪಂಕ್ತಿ | ಸಪಂಕ್ತಿ |
| 11 | 23 | ಮಯಾ | ಮಮಾ |
| 14 | 12 | ಪರಿಣಯ | ಪರಿಣಾಮ |
| 16 | 17 | ಮೂಲ ವಿಗ್ರಹವು ದೇವಸ್ಥಾನದ ಹತ್ತಿರ ಕೆರೆಗೆ ಎಸೆಯಲ್ಪಟ್ಟಿದೆ. ಈಗ ಶಂಕರನಾರಾಯಣ ವಿಗ್ರಹವು | |
| 23 | 17 | ಕಾರಿಗಳೂ | ಕಾರಿಗಳು |
| 27 | 30 | ಶಿವಳ್ಳಿ | ಶಿವ |
| 32 | 23 | ಮೂಲಿನ | ಮೂಲಕ |
| 38 | 27 | ತೂರಿಸು | ತೋರಿಸು |
| 46 | 5 | ಯವರು | ಯವರೆಂದು |
| 51 | 19,20 | ತ್ತಾರೋ? | ತ್ತಾರೆ |
| 51 | 21 | ರ | ರು |
| 57 | 12 | ಶೂದ್ರರನ್ನಾಗಿ | ಶೂದ್ರರನ್ನು ಬ್ರಾಮ್ಹಣರನ್ನಾಗಿ |
| 57 | 20 | ಬರಲಾದೀತೇ | ಬದಲಾದೀತೇ |
| 58 | 25 | ಪಟ್ ಫಟ್ | ಪಟ್ ಪಟ್ |
| 59 | 8 | ನಿರ್ಮೂಲಿತ | ನಿರ್ಮಿತ |
| 60 | 22 | ಯ | ಯಾ |
| 62 | 10 | ಇದನ್ನೂ | ಇದನ್ನು |
| 63 | 9 | 9 | 7 |
| 63 | 29 | ಬ್ರಮ್ಹಾಚಾರಿ | ಬ್ರಮ್ಹಚಾರಿ |
| 73 | 24 | ಪತೇಶ್ವಾಪಿ | ಪತೇಶ್ಚಾಪಿ |
| 75 | 26 | ತಾತ್ | ತಾನ್ |
| ,, | ,, | ಕಾನ್ | ಕ್ತಾನ್ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 88 | 7 | ರಲ್ಲಿ | ರಲ್ಲಿ |
| 94 | 13 | ವೆಂಬ | ವ |
| 98 | 27 | ವುದು | ವವರು |
| 103 | 4 | ವಿಠಾಧಿ | ಪೀಠಾದಿ |
| 104 | 31 | ಪ್ರಸ್ಥಾಪನೆ | ಪ್ರಸ್ತಾವನೆ |
| 107 | 7 | ಶಷ್ಯ | ಶುಷ್ಕ |
| 124 | 26 | ಜನತೆ | ಜನತೆಗೆ |
| 125 | 5 | ಶರ್ಮರ | ಆ ಶರ್ಮರ |
| 127 | 19 | ಆತನು | ಆತನಿಗೆ |

ಉಡುಪಿ ಶ್ರೀಕೃಷ್ಣ ಮಠದ ಅನೇಕ ಪ್ರಾಚೀನ ರಿಕಾರ್ಡುಗಳಲ್ಲಿ 'ಶ್ರೀಕೃಷ್ಣ ಮಠ' ಎಂದೇ ನಮೂದಿಸಲಾಗಿರುವುದರಿಂದ ಅದನ್ನೆಲ್ಲಾ ಪ್ರಕಟಿಸಲು ಅಸಾಧ್ಯವೆಂದು ಬಿಡಲಾಗಿದೆ.